

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೫೭    ಡಿಸೆಂಬರ್ ೨೦೨೧ 2021    ಸಂಚಿಕೆ : ೧೨



ಶ್ರೀಮಠದಲ್ಲಿ ನವೆಂಬರ್ ೨೯ ರಂದು ಪರಮಪೂಜ್ಯ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಗೆ ಲಕ್ಷಬಿಲ್ವಾರ್ಚಣೆ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಮತ್ತು ಶ್ರೀಮತಿ ಚನ್ನಮ್ಮ ಬಸವರಾಜ ಬೊಮ್ಮಾಯಿ ಅವರು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಶಿಕ್ಷಣ ಸಚಿವ ಶ್ರೀ ಬಿ.ಸಿ. ನಾಗೇಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪರಮಪೂಜ್ಯ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ಡಾ. ಎಸ್. ಪರಮೇಶ್ ವಿರಚಿತ 'ಮಹಾಬಯಲು' ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಲೋಕಾರ್ಪಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಡಾ. ಗೊ.ರು.ಚನ್ನಬಸಪ್ಪ, ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀ ಹೆಚ್.ಸಿ. ಪರಮಶಿವಯ್ಯ ಹಾಗೂ ಡಾ. ಎಸ್. ಪರಮೇಶ್ ಅವರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಏರ್ಪಡಿಸಿದ್ದ ಹಿರಿಯ ಸಂಸ್ಕೃತ ವಿದ್ವಾಂಸ ವಿದ್ವಾನ್ ಶ್ರೀ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರ ಅಭಿನಂದನಾ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನೆಲಮಂಗಲ ಶ್ರೀ ಪವಾಡ ಬಸವಣ್ಣದೇವರ ಮಠದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಿದ್ವಾನ್ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರು, ಡಾ. ಎಂ.ಎನ್. ಚನ್ನಬಸಪ್ಪ, ಶ್ರೀ ಟಿ.ಕೆ. ನಂಜುಂಡಪ್ಪ, ಹಾಗೂ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಉಪಸ್ಥಿತರಿದ್ದರು.



ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿದ್ದ ದೆಹಲಿ ಕರ್ನಾಟಕ ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ರೇಣುಕುಮಾರ್, ಯುವ ಇಂಡಿಯಾ ಗ್ಲೋಬಲ್ ಸೆಲ್ಯೂಷನ್ ಅಧ್ಯಕ್ಷ ಶ್ರೀ ಎಂ. ವಸಂತಕುಮಾರ್, ಕೌಶಲ್ಯ ತರಬೇತಿ ಸಂಸ್ಥೆಯ ಅಧ್ಯಕ್ಷ ಶ್ರೀ ಟಿ. ಹರಿಪ್ರಸಾದ್, ಆರೋಗ್ಯ ಇಲಾಖೆಯ ರಾಜ್ಯ ಪರಿವೀಕ್ಷಣಾ ಹಾಗೂ ತಪಾಸಣಾ ಸಮಿತಿ ಸದಸ್ಯರಾದ ಶ್ರೀ ವಸಂತ ಅವರು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಮಾಡಿ ದಿವ್ಯಾಶೀರ್ವಾದ ಪಡೆದರು.

## ಜನವರಿ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | 31 | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## ಫೆಬ್ರವರಿ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | | | | | |

## ಮಾರ್ಚ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | | |

## ಏಪ್ರಿಲ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## ಮೇ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | | | | |

# ದಿನದರ್ಶಿ 2022



## 2022ನೇ ವರ್ಷದ ಸರ್ಕಾರಿ ರಜಾ ದಿನಗಳು

| | | | |
|---|---|---|---|
| ಜನವರಿ | 15 | ಶನಿ | ಮಕರ ಸಂಕ್ರಾಂತಿ |
| | 26 | ಬುಧ | ಗಣರಾಜ್ಯೋತ್ಸವ |
| ಮಾರ್ಚ್ | 01 | ಮಂ. | ಮಹಾಶಿವರಾತ್ರಿ |
| ಏಪ್ರಿಲ್ | 02 | ಶನಿ | ಚಾಂದ್ರಮಾನ ಯುಗಾದಿ |
| | 14 | ಗುರು | ಮಹಾವೀರ ಜಯಂತಿ / ಅಂಬೇಡ್ಕರ್ ಜಯಂತಿ |
| | 15 | ಶುಕ್ರ | ಶುಭ ಶುಕ್ರವಾರ (ಗುಡ್ ಫ್ರೈಡೇ) |
| ಮೇ | 01 | ಭಾನು | ಕಾರ್ಮಿಕರ ದಿನಾಚರಣೆ |
| | 03 | ಮಂ. | ಬಸವೇಶ್ವರ ಜಯಂತಿ / ರಂಜಾನ್ |
| ಜುಲೈ | 10 | ಭಾನು | ಬಕ್ರೀದ್ |
| ಆಗಸ್ಟ್ | 09 | ಮಂ. | ಮೊಹರಂ ಕಡೇದಿನ |
| | 15 | ಸೋಮ | ಸ್ವಾತಂತ್ರ್ಯ ದಿನಾಚರಣೆ |
| | 31 | ಬುಧ | ವರಸಿದ್ಧಿ ವಿನಾಯಕ ವ್ರತ |
| ಸೆಪ್ಟೆಂಬರ್ | 25 | ಭಾನು | ಮಹಾಲಯ ಅಮಾವಾಸ್ಯೆ |
| ಅಕ್ಟೋಬರ್ | 02 | ಭಾನು | ಗಾಂಧಿ-ಲಾಲ್‌ಬಹದ್ದೂರ್ ಶಾಸ್ತ್ರಿ ಜಯಂತಿ |
| | 04 | ಮಂ. | ಮಹಾನವಮಿ-ಆಯುಧಪೂಜೆ |
| | 05 | ಬುಧ | ವಿಜಯದಶಮಿ |
| | 09 | ಭಾನು | ಶ್ರೀ ವಾಲ್ಮೀಕಿ ಜಯಂತಿ / ಈದ್ ಮಿಲಾದ್ |
| | 24 | ಸೋಮ | ನರಕ ಚತುರ್ದಶಿ |
| | 26 | ಬುಧ | ಬಲಿಪಾಡ್ಯಮಿ-ದೀಪಾವಳಿ ಹಬ್ಬ |
| ನವೆಂಬರ್ | 01 | ಮಂ. | ಕನ್ನಡ ರಾಜ್ಯೋತ್ಸವ |
| | 11 | ಶುಕ್ರ | ಶ್ರೀ ಕನಕದಾಸರ ಜಯಂತಿ |
| ಡಿಸೆಂಬರ್ | 25 | ಭಾನು | ಕ್ರಿಸ್‌ಮಸ್ ದಿನಾಚರಣೆ |

## ಜೂನ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | | |

## ಜುಲೈ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 31 | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## ಆಗಸ್ಟ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | | | |

## ಸೆಪ್ಟೆಂಬರ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | |

## ಅಕ್ಟೋಬರ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | 31 | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## ನವೆಂಬರ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | | | |

## ಡಿಸೆಂಬರ್ 2022

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |



## ಅಂತರಂಗ

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೭ ಡಿಸೆಂಬರ್ ೨೦೨೧ ಸಂಚಿಕೆ : ೧೨


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಮೊ : ೯೧೪೧೦ ೩೬೩೪೫

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ .................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ತ್ರಿವಿಧ ದಾಸೋಹಿ, ಮಹಾ ಮಾನವತಾವಾದಿ, ಮಹಾತಪಸ್ವಿ, ಕಾಯಕಯೋಗಿ, ನಿರಂಜನ ಪ್ರಣವಸ್ವರೂಪಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದ, ಮಾರ್ಗದರ್ಶನದಿಂದ ಅಕ್ಟೋಬರ್ ೪, ೧೯೫೪ ರಲ್ಲಿ ಪ್ರಾರಂಭವಾದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ ಸಾಧನೆಗಳ ಹೆಜ್ಜೆ ಗುರುತುಗಳನ್ನು ಮೂಡಿಸುತ್ತಾ ಬಂದಿದ್ದು, ಹದಿನಾರು ಸಾವಿರಕ್ಕೂ ಹೆಚ್ಚು ಸದಸ್ಯರನ್ನೊಳಗೊಂಡ ಬೃಹತ್ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಕಳೆದ ೬೭ ವರ್ಷಗಳಿಂದ ಶ್ರೀಮಠದ ಸೇವಾ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಪ್ರತಿವರ್ಷ ಶಿವರಾತ್ರಿ ಹಬ್ಬದ ಸಂದರ್ಭದಲ್ಲಿ ನಡೆಯುತ್ತಾ ಬಂದಿರುವ ಶ್ರೀಮಠದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ ಸಂದರ್ಭದಲ್ಲಿ ನಡೆಯುವ ವಿವಿಧ ಧಾರ್ಮಿಕ ಕಾರ್ಯಕ್ರಮಗಳ ಸುವ್ಯವಸ್ಥೆ ಮಾಡುವಲ್ಲಿ, ಜಾತ್ರೆಗೆ ಬರುವ ಲಕ್ಷಾಂತರ ಭಕ್ತಾದಿಗಳಿಗೆ ಯಾವ ಲೋಪವುಂಟಾಗದಂತೆ ದಾಸೋಹ ವ್ಯವಸ್ಥೆ ಮಾಡುವಲ್ಲಿ ಸೇವೆ ಸಲ್ಲಿಸುತ್ತಾ ಬಂದಿದೆ. ಪರಮಪೂಜ್ಯ ದೂರದೃಷ್ಟಿಯಿಂದ ೧೯೬೪ ರಲ್ಲಿ ಪ್ರಾರಂಭವಾದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ವರ್ಷದಿಂದ ವರ್ಷಕ್ಕೆ ಪ್ರಗತಿಪಥದಲ್ಲಿ ಮುನ್ನಡೆಯಲು ಸಂಘದ ಪಾತ್ರ ಮಹತ್ತರವಾದುದು.

ಅಲ್ಲದೆ ಕಳೆದ ೫೭ ವರ್ಷಗಳಿಂದ ಶ್ರೀಮಠದ ಮುಖವಾಣಿಯಾದ 'ಸಿದ್ಧಗಂಗಾ' ಪತ್ರಿಕೆ, ಸಾಹಿತ್ಯ, ಕಲೆ, ಸಂಸ್ಕೃತಿ, ಸಾಮಾಜಿಕ, ಶೈಕ್ಷಣಿಕ, ಕೃಷಿ, ಆರೋಗ್ಯ ಮೊದಲಾದ ವಿಚಾರಗಳನ್ನೊಳಗೊಂಡ ಪತ್ರಿಕೆಯಾಗಿದ್ದು ವಿದ್ವಾಂಸರ, ಓದುಗರ ಪ್ರಶಂಸೆಗೆ, ಅಭಿಮಾನಕ್ಕೆ ಪಾತ್ರವಾಗಿದೆ ಎಂದು ಹೇಳಲು ಸಂತೋಷವಾಗುತ್ತದೆ. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಪತ್ರಿಕೆಯ ಬಗ್ಗೆ ಇರುವ ಕಳಕಳಿಯಿಂದ ಪತ್ರಿಕೆ ಪ್ರಗತಿ ಪಥದಲ್ಲಿ ಮುನ್ನಡೆಯುತ್ತಿದೆ ಎಂದು ಹೇಳುವಾಗ ಧನ್ಯತಾಭಾವನೆ ಉಂಟಾಗುತ್ತದೆ. ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡುತ್ತಿರುವ ಪೂಜ್ಯರ ದಿವ್ಯಚರಣಗಳಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಶ್ರೀಮಠದಲ್ಲಿ ಕಾಲಕಾಲಕ್ಕೆ ನಡೆದ ಅಭೂತಪೂರ್ವ ಸಮಾರಂಭಗಳೆಂದು ಭಕ್ತರ, ಅಭಿಮಾನಿಗಳ ಮನಸ್ಸಿನಲ್ಲಿ ಹಚ್ಚಹಸಿರಾಗಿರುವ ಪರಮಪೂಜ್ಯರ ಪಟ್ಟಾಧಿಕಾರದ ಸುವರ್ಣ ಮಹೋತ್ಸವ, ವಜ್ರ ಮಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವ ಹಾಗೂ ಪ್ರತಿವರ್ಷ ನಡೆಯುತ್ತಾ ಬಂದಿದ್ದ ಗುರುವಂದನಾ ಸಮಾರಂಭಗಳು 'ನಭೂತೋ ನ ಭವಿಷ್ಯತಿ'ಯಂತೆ ನಡೆಯಲು ಸಂಘ ವಹಿಸಿದ ಪಾತ್ರ, ಮಾಡಿದ ಸೇವೆ ಮಹತ್ತರವಾದುದು, ಈ ಸಂದರ್ಭಗಳ ಸವಿನೆನಪಿಗಾಗಿ ಹೊರತಂದ 'ಸಿದ್ಧಗಂಗಾಶ್ರೀ', 'ದಾಸೋಹಸಿರಿ', 'ಸಂದೇಶ ಸಂಚಯ' ಸ್ಮರಣ ಸಂಪುಟಗಳು, ಶತಮಾನೋತ್ಸವ ಸಂದರ್ಭದಲ್ಲಿ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಹೊರತಂದ ೧೧೧ ಕೃತಿಗಳು ಹಾಗೂ 'ಅನುಭಾವ ಪಥ' ಬೃಹತ್ ಗ್ರಂಥ ಪ್ರಕಟವಾಗಲು ಹಾಗೂ ೧೯೮೮ ರಿಂದ ಪ್ರಾರಂಭವಾದ ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯಲು ಸಂಘ ತನ್ನನ್ನು ಅರ್ಪಣಾಭಾವದಿಂದ ತೊಡಗಿಸಿಕೊಂಡು ಸೇವೆ ಸಲ್ಲಿಸುತ್ತಾ ಬಂದಿವೆ.

ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಮತ್ತೊಂದು ಗಮನಾರ್ಹ ಸೇವೆಯೆಂದರೆ ನೀರು ಸರಬರಾಜು ಹಾಗೂ ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಯನ್ನು ರೂಪಿಸಿ ಕಾರ್ಯಪ್ರವೃತ್ತರಾಗಿ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕಾರಣರಾದ ಹಳೆಯ ವಿದ್ಯಾರ್ಥಿಗಳು, ಭಕ್ತರು, ಅಭಿಮಾನಿಗಳು, ದಾನಿಗಳ ಉದಾರ ಕೊಡುಗೆಯನ್ನು, ಸಹಕಾರವನ್ನು ಮರೆಯುವಂತಿಲ್ಲ. ಸಂಘದ ಸರ್ವತೋಮುಖ ಬೆಳವಣಿಗೆಗೆ ನಿಸ್ವಾರ್ಥ ಸೇವೆಯನ್ನು ಸಲ್ಲಿಸುತ್ತಾ ಬಂದಿರುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪ ಹಾಗೂ ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರ ಸೇವೆ ಸ್ತುತ್ಯಾರ್ಹವಾದುದು.

ಈ ಸಂದರ್ಭದಲ್ಲಿ ಪತ್ರಿಕೆ ಮೌಲ್ಯಯುತವಾಗಿ ಬರಲು ಸಹಕಾರ ನೀಡುತ್ತಿರುವ ಲೇಖಕ ಬಂಧುಗಳಿಗೆ, ಚಂದಾದಾರರಿಗೆ, ಓದುಗರಿಗೆ, ಸಂಪಾದಕರಿಗೆ, ಪ್ರಕಾಶಕರಿಗೆ, ಹಳೆಯ ವಿದ್ಯಾರ್ಥಿ ಸಂಘ ಹಾಗೂ ಹಿತೈಷಿ ಸಂಘದ ಪದಾಧಿಕಾರಿಗಳಿಗೆ, ಶ್ರೀಮಠದ ಆಡಳಿತ ವರ್ಗದವರಿಗೆ, ಪತ್ರಿಕಾ ಬಳಗದವರಿಗೆ, ಮುದ್ರಣಕಾರರಿಗೆ ಹೊಸ ವರ್ಷ ಹಾಗೂ ಸಂಕ್ರಾಂತಿ ಹಬ್ಬದ ಹಾರ್ದಿಕ ಶುಭಾಶಯಗಳು.

ಪ್ರೊ. ಹೆಚ್.ವಿ. ವೀರಭದ್ರಯ್ಯ







# ಶ್ರೀವಾಣಿ



**'ಕೆಡಿಸದಿಪ್ಪಭಿಮಾನದಿಂ ಧನಮುಂಟೆ'** ಮನುಷ್ಯನಿಗೆ ಆತ್ಮಗೌರವ ಅವಶ್ಯಕವಾಗಿ ಬೇಕಾಗಿರುವ ಒಂದು ಮಹಾತತ್ತ್ವ. ಜೀವನದಲ್ಲಿ ಅವನು ಗೌರವದಿಂದ ಬಾಳ್ವಿಕೆ ಮಾಡುವಂತಹ ಒಂದು ತತ್ತ್ವ. ಬಹಳ ಶ್ರೇಷ್ಠವಾದಂತಹದ್ದು. ಹಿಂದೆ ಬಹಳ ಮಂದಿ ನಮ್ಮನ್ನು ಬ್ರಿಟಿಷರು, ಮೊಘಲರು, ಆಳ್ವಿಕೆ ಮಾಡುತ್ತಿದ್ದ ಕಾಲದಲ್ಲಿ ಬಹಳ ಮಂದಿ ಗೌರವಕ್ಕೋಸ್ಕರ ಪ್ರಾಣತ್ಯಾಗ ಮಾಡಿದ್ದಾರೆ. ಸರ್ವವನ್ನೂ ತ್ಯಾಗ ಮಾಡಿದ್ದಾರೆ. ಅದೂ ಕೂಡ, ಸಾಮಾನ್ಯ ಚಿಕ್ಕವಯಸ್ಸಿನ ಹುಡುಗರು, ಹೆಣ್ಣುಮಕ್ಕಳು, ಗಂಡುಮಕ್ಕಳು ಎಲ್ಲರೂ ಕೂಡ ಪ್ರಾಣತ್ಯಾಗ ಮಾಡಿದ್ದಾರೆ. ಒಬ್ಬ ಹುಡುಗನನ್ನು ಬ್ರಿಟಿಷರು ಬಂದು ಕೈಮುಗಿ ಎಂದು ಹೇಳಿದರು. ನಾನು ಕೈ ಮುಗಿಯುವುದಿಲ್ಲ ಎಂದ ಕೂಡಲೇ ಎರಡೂ ಕೈಗಳನ್ನು ಕತ್ತರಿಸಿದರು. ಪ್ರಾಣಹೋಯಿತು. ಆ ಹುಡುಗನಂಥ ಅಭಿಮಾನ ಬೇಕು, ಮನುಷ್ಯನಿಗೆ ಗೌರವನಿಂದ ಬಾಳ್ವಿಕೆ ಮಾಡುವಂತಹ ಚೈತನ್ಯ ಬೇಕು. ಒಂದು ಐತಿಹಾಸಿಕ ಪ್ರಸಂಗ, ಕಾಲ್ಪನಿಕವಾದುದಲ್ಲ, ನಿಜವಾದ ನಡೆದಂತಹ ಘಟನೆ ಹಿಂದೆ ನಿಮಗೆ ಹೇಳಿತ್ತು. ಹಿಂದೆ ಉದಯಪುರದ ಪ್ರತಾಪಸಿಂಹ ಮಹಾರಾಜನ ಹತ್ತು ವರ್ಷದ ಮಗಳು ಚಂಪಾವತಿ. ತನ್ನ ತಮ್ಮನಿಗೋಸ್ಕರ ತಾನು ಉಪವಾಸ ಮಾಡಿ ತ್ಯಾಗ ಮಾಡಿದಳು. ಇದೇನು ಸಾಮಾನ್ಯವಾದ ತ್ಯಾಗವಲ್ಲ. ಆಗ ಆ ಮಗುವಿನ ಬಾಯಿಂದ ಬಂದಂತಹ ಮಾತು ಎಂತಹುದು. ಸ್ಮಾರಕ ಮಾಡು ಎಂದು ಕೇಳಲಿಲ್ಲ, ಆ ಹತ್ತು ವರ್ಷದ ಮಗುವಿನ ಮಾತನ್ನು ವಿಚಾರ ಮಾಡಬೇಕು 'ಅಪ್ಪಾಜಿ! ನಾನೇ ಸಾಯಲಿ, ನನ್ನ ತಮ್ಮ ಸಾಯಲಿ, ನನ್ನ ತಾಯಿ ಸಾಯಲಿ, ನಿಮ್ಮ ವಂಶ ನಿರ್ವಂಶವಾಗಲಿ, ಆದರೆ ಕ್ಷತ್ರಿಯ ಕುಲಚಕ್ರವರ್ತಿ, ಕ್ಷತ್ರಿಯ ಕುಲವೀರ, ನನ್ನ ತಂದೆ ಎಲ್ಲಿಯವರೆಗೆ ಬದುಕಿರುತ್ತಾರೋ, ಅಲ್ಲಿಯವರೆಗೆ ಶತ್ರುವಿಗೆ ಅಧೀನವಾಗಬಾರದು' ಎಂದು. ಇಂಥ ರಾಷ್ಟ್ರ ನಮ್ಮದು, ಇಂಥ ಪರಂಪರೆ ಉಳ್ಳಂತಹ ರಾಷ್ಟ್ರ ನಮ್ಮದು.

೨-೬-೧೯೮೦

* * *

ಭಾರತೀಯರು ಒಳ್ಳೆಯ ಮಾನವರಾಗಿದ್ದರು. ಒಳ್ಳೆ ಬಾಳನ್ನು ಬಾಳಿ ಎಲ್ಲರಿಗೂ ಮಾರ್ಗವನ್ನು ತೋರಿದರು. ಮುಂದೆಯೂ ಜಗತ್ತೆಲ್ಲ ಸುಖಶಾಂತಿ ಕಾಣಬೇಕಾದರೆ, ಎಲ್ಲರ ಬಾಳು ನೆಮ್ಮದಿಯಾಗಿರ ಬೇಕಾದರೆ, ಸರ್ವರ ಕಲ್ಯಾಣವಾಗಬೇಕಾದರೆ, ಭರತಖಂಡವೇ ಮಾರ್ಗವನ್ನು ತೋರಿಸಬೇಕೆಂಬ ಮಾತನ್ನು ಎಲ್ಲರೂ ತಿಳಿದುಕೊಳ್ಳಬೇಕು. ನಮ್ಮದು ಶಾಂತಿಯ ಭೂಮಿ, ಶಾಂತಿಯೇ ಮಾತೃಸ್ಥಾನ, ಇದು ಚರಾಚರಾತ್ಮಕವಾದ ಶಾಂತಿ, ಜೀವಕೋಟಿಗೂ ಜಡ ವಸ್ತುಗಳಿಗೂ ಶಾಂತಿಯನ್ನು ಅಪೇಕ್ಷೆ ಪಡುವವರು, ಅಂದ ಮೇಲೆ ಭಾರತೀಯರಾದ ನಾವು ಹಳ್ಳಿಯಿಂದ್ದ ದಿಲ್ಲಿಯವರೆಗೆ, ಭಾರತೀಯರೆಂಬುದನ್ನು ವಿಚಾರ ಮಾಡಬೇಕಾಗಿದೆ. ಭಾರತೀಯರಾದ ನಾವು ಪ್ರಭುಸ್ಥಾನದಲ್ಲಿದ್ದೇವೆ. ಮನುಕುಲಕ್ಕೆ ಪ್ರಭುಗಳು ನಾವು, ಮಾರ್ಗ ತೋರಿಸುವವರು ನಾವು. ಈ ಭಾವನೆ ಎಲ್ಲರಲ್ಲಿರಬೇಕು. ಇಂತಹ ಪವಿತ್ರವಾದುದು ಭರತಖಂಡ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಹೊನ್ನು ತನ್ನ ಬಣ್ಣದ ಲೇಸುವ ತಾನರಿಯದಂತೆ**
**ಬೆಲ್ಲ ತನ್ನ ಮಧುರವ ತಾನರಿಯದಂತೆ**
**ಪುಷ್ಪ ತನ್ನ ಪರಿಮಳವ ತಾನರಿಯದಂತೆ**
**ವಾರಿಶಿಲೆ ಅಂಬುಧಿಯೊಳು ಲೀಯವಾದಂತೆ**
**ಮನ ಮಹಾಲಿಂಗದಲ್ಲಿ ಲೀಯವಾಗಿ**
**ಮನವಳಿದು ನೆನಹುಳಿದು**
**ನೆನಹು ನಿಷ್ಪತ್ತಿಯಾಗಿ ನಾನು ನೀನಾಗಿರ್ದೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಹೊನ್ನು ತನ್ನ ಬಣ್ಣದ ಲೇಸುವ ತಾನರಿಯದಂತೆ -ಹೊನ್ನು ಸುವರ್ಣವು, ತನ್ನ ಬಣ್ಣದ -ಹತ್ತು ಬಣ್ಣ ಹದಿನಾರು ಬಣ್ಣದ, ಲೇಸುವ-ಒಪ್ಪವನು ; ತಾನರಿಯದಂತೆ-ತಾ ತಿಳಿಯದ ಹಾಂಗೆ, ಆಚಾರಲಿಂಗವು ಭಕ್ತನ ಒಳಕೊಂಡಿಪ್ಪುದು, ಬೆಲ್ಲ ತನ್ನ ಮಧುರವ ತಾನರಿಯದಂತೆ : ಬೆಲ್ಲ-ಗುಳವು, ತನ್ನ ಮಧುರವ-ತನ್ನ ಸ್ವಾದವನು, ತಾನರಿಯದಂತೆ - ತಾ ತಿಳಿಯದ ಹಾಂಗೆ, ಗುರುಲಿಂಗವು ಮಹೇಶ್ವರನ ಒಳಕೊಂಡಿಪ್ಪುದು; ಪುಷ್ಪ ತನ್ನ ಪರಿಮಳವ ತಾನರಿಯದಂತೆ: ಪುಷ್ಪ - ಪ್ರಸೂನವು, ತನ್ನ ಪರಿಮಳವ -ತನ್ನ ಸದ್ವಾಸನೆಯನು, ತಾನರಿಯದಂತೆ-ತಾ ತಿಳಿಯದ ಹಾಂಗೆ, ಶಿವಲಿಂಗವು ಪ್ರಸಾದಿಯ ಒಳಕೊಂಡಿಪ್ಪುದು; ವಾರಿಶಿಲೆ ಅಂಬುಧಿಯೊಳು ಲೀಯವಾದಂತೆ : ವಾರಿಶಿಲೆ-ಪಯೋಧರಪಳವು, ಅಂಬುಧಿಯೊಳು-ಸಮುದ್ರದಲ್ಲಿ, ಲೀಯವಾದಂತೆ-ಸಮರಸವಾದ ಹಾಂಗೆ, ಜಂಗಮಲಿಂಗವು ಪ್ರಾಣಲಿಂಗಿಯ ಒಳಕೊಂಡಿಪ್ಪುದು; ಮನ ಮಹಾಲಿಂಗದಲ್ಲಿ ಲೀಯವಾಗಿ-ಮನಸ್ಸು ಮಹಾಲಿಂಗದಲ್ಲಿ ಲೀನವಾಗಿ, ಮನವಳಿದು-ಮನದ ವರ್ತನೆ ನಷ್ಟವಾಗಿ, ನೆನಹು-ಸ್ಮರಣೆಯು, ನಿಷ್ಪತ್ತಿಯಾಗಿ-ತರಹರವಾಗಿ, ನಾನು ನೀನಾಗಿರ್ದೆನಯ್ಯಾ-ಶರಣನೆ ಲಿಂಗ, ಲಿಂಗವೇ ಶರಣನಾಗಿರ್ದೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)**

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅತ್ತ ಮಕ್ಕಳಕೈಗೆ ತುತ್ತೊಟ್ಟೊಕೊಡದೇನೆ
ಹತ್ತು ಪುರಾಣವ ಕೇಳಿದರೆ ಬಹುದೇನು? । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪತಿಯ ಸಂತೋಷಕ್ಕೆ ಸತಿಯು ಸೇವಿಸುವಂತೆ
ಲಿಂಗಪತಿಗೆ ಶರಣ ಸತಿಯಾಗಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಂದನಲಿ ಶಿವನಬಂಧನವ ಕಾಣುತ
ಚೆಂದದಲಿ ಜೀವನ ನಡೆಸೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನಗಿರಿಯಾದೆ ಸಿರಿದೊರೆಯೆನಿಸಿದೆ
ಪರಮನಿರಂಜನ ಪ್ರಭುವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರು ಬಲ್ಲರು ನಿನ್ನಮೇರುಸ್ವರೂಪವ
ಕಾರುಣ್ಯಮೂರುತಿ ಶಿವಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇರುವೆ ಎಲ್ಲರೊಳಗೆ ಇದ್ದು ಇಲ್ಲದ ತೆರದಿ
ಅರಿವರಾರು ನಿನ್ನ ಸಿರಿಚರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಈ ಸೊಬಗ ಇಲ್ಲಿಗೆ ಎಲ್ಲಿಂದ ನೀ ತಂದೆ
ಯಾವಲೋಕದ ಭಾಗ್ಯ ಇದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉಂಡುತೇಗಿತು ಲೋಕ ಕೊಂಡಾಡಿ ದಾಸೋಹ
ಕಂಡ ಕಂಡಲ್ಲಿ ನಿನ್ನ ಮಾತು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಊರ್ಧ್ವಜಗವನೆ ಸೃಜಿಸಿ ಊರ್ಜಿತವಗೊಳಿಸಿದೆ
ಊರ್ವರೆಯ ದೊರೆಯೆನಿಸಿ ಸಲಹಿದೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಖುಷಿಯಾದೆ ಗುರುಕುಲಕೆ ಕಾಯಕವ ಬಿತ್ತುವ ನಡೆದೆ
ಖುಷಿಯ ನೀಡುತ ನಡೆದೆ ಜಗದೊಳಗೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಕ್ಷೇತ್ರವಾರ್ತೆ

# ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಗದ್ದುಗೆಗೆ ಹೆಲಿಕಾಪ್ಟರ್ ನಿಂದ ಲಕ್ಷಪುಷ್ಪ ಬಿಲ್ವಾರ್ಚನೆ. ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರಿಂದ ಚಾಲನೆ

ನವೆಂಬರ್ ೨೯, ಕೊನೆಯ ಕಾರ್ತೀಕ ಸೋಮವಾರ ಶ್ರೀ ಸಿದ್ಧಗಂಗಾ ಮಠದಲ್ಲಿ ಹಬ್ಬದ ವಾತಾವರಣ. ಪರಮಪೂಜ್ಯ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ವರ್ಷದ ಅಂಗವಾಗಿ ವೀರಶೈವ ಲಿಂಗಾಯತ ಮಹಾವೇದಿಕೆ ಗದ್ದುಗೆಗೆ ಲಕ್ಷ ಬಿಲ್ವಾರ್ಚನೆ ಹಾಗೂ ಅದರ ಅಂಗವಾಗಿ ವಿವಿಧ ಧಾರ್ಮಿಕ ಪೂಜ್ಯ ಕಾರ್ಯಕ್ರಮಗಳನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಹಮ್ಮಿಕೊಳ್ಳಲಾಗಿದ್ದು ಸಾವಿರಾರು ಭಕ್ತರು ಸಾಕ್ಷಿಯಾದರು. ಮುಂಜಾನೆ ೪ ರಿಂದಲೇ ರುದ್ರಾಭಿಷೇಕ ಸೇರಿದಂತೆ ಪೂಜಾ ಕೈಂಕರ್ಯವನ್ನು ಪ್ರಾರಂಭಿಸಲಾಯಿತು. ಮಧ್ಯಾಹ್ನ ಹೆಲಿಕಾಪ್ಟರ್‌ನಿಂದ ಲಕ್ಷ ಬಿಲ್ವಾರ್ಚನೆ ನೆರವೇರಿಸಿದ ಶುಭ ಸಂದರ್ಭವನ್ನು ಮಠದ ಮಕ್ಕಳು, ಸಾವಿರಾರು ಭಕ್ತರು ಕಣ್ತುಂಬಿಕೊಂಡು ಧನ್ಯತೆಯನ್ನು ಪಡೆದರು. ಇದೊಂದು ಅವಿಸ್ಮರಣೀಯ ಸಂದರ್ಭವಾಗಿತ್ತು.

ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರು, ಪತ್ನಿ ಶ್ರೀಮತಿ ಚನ್ನಮ್ಮವರೊಂದಿಗೆ ಈ ಅಪೂರ್ವ ಕಾರ್ಯಕ್ರಮದಲ್ಲಿ ಭಾಗವಹಿಸಿ ಲಕ್ಷ ಬಿಲ್ವಾರ್ಚನೆಯನ್ನು ಭಕ್ತಿಯಿಂದ ನೆರವೇರಿಸಿ, ಗದ್ದುಗೆಗೆ ವಿಶೇಷ ಪೂಜೆಯನ್ನು









ಸಲ್ಲಿಸಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ "ನಡೆದಾಡುವ ದೇವರೆಂದೇ ನಾವೆಲ್ಲ ಆರಾಧಿಸುವ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಗೆ ಬಿಲ್ವಾರ್ಚನೆ ಮಾಡಲು ಬಂದಿದ್ದೇನೆ. ಕಾರ್ಯಕ್ರಮದಲ್ಲಿ ಭಾಗಿಯಾಗಿರುವುದು ಮತ್ತು ಪೂಜ್ಯ ಶ್ರೀಗಳವರ ಕಾಲದಲ್ಲಿ ನಾವಿದ್ದೇವೆ ಎಂಬುದೇ ಪುಣ್ಯವಿಶೇಷ. ಪರಮಪೂಜ್ಯ ಶ್ರೀ ಶ್ರೀಗಳವರು ನಾಡಿನ ಸರ್ವಾಂಗೀಣ ಅಭಿವೃದ್ಧಿಗೆ ಅನೇಕ ರೀತಿಯ ಕೊಡುಗೆ ನೀಡಿದ್ದಾರೆ. ಆಧುನಿಕ ಕಾಲದಲ್ಲಿ ನಡೆದಾಡುವ ದೇವರು ಎಂದರೆ ಅವರು ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾತ್ರ" ಎಂದು ಹೇಳಿದರು.

ಮುಖ್ಯಮಂತ್ರಿಯವರು ತಮ್ಮ ಮಾತುಗಳನ್ನು ಮುಂದುವರಿಸುತ್ತಾ "ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಲಿಂಗೈಕ್ಯ ದಿನವನ್ನು ದಾಸೋಹ ದಿನವೆಂದು ಈಗಾಗಲೇ ಘೋಷಿಸಲಾಗಿದ್ದು ಕಾರ್ಯಕ್ರಮದ ರೂಪರೇಷೆಯ ಬಗ್ಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರೊಂದಿಗೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗುವುದು" ಎಂದು ಹೇಳಿದರು. ಶ್ರೀ ಬಸವರಾಜ ಬೊಮ್ಮಾಯಿ ದಂಪತಿಗಳು ಪೂಜ್ಯರ ದರ್ಶನ ಮಾಡಿ ಆಶೀರ್ವಾದ ಪಡೆದರು.

ಕಾರ್ಯಕ್ರಮದ ರೂವಾರಿ ವೀರಶೈವ ಲಿಂಗಾಯತ ಮಹಾವೇದಿಕೆ ರಾಜ್ಯಾಧ್ಯಕ್ಷ ಶ್ರೀ ಪ್ರಶಾಂತ್ ಕಲ್ಲೂರ್‌ರವರು ಮಾತನಾಡಿ "ಪೂಜ್ಯ ಶ್ರೀಗಳವರ ಗದ್ದುಗೆಗೆ ಲಕ್ಷಪುಷ್ಪ ಬಿಲ್ವಾರ್ಚನೆ ಮಾಡಿದ್ದೇವೆ. ಪೂಜ್ಯರ ೪೫ ಅಡಿಗಳ ಕಟೌಟ್ ಮಾಡಲಾಗಿದ್ದು ಹೆಲಿಕಾಪ್ಟರ್ ಮೂಲಕ ಪುಷ್ಪಾರ್ಚನೆ ಮಾಡಿದ್ದೇವೆ. ಪೂಜ್ಯ ಶ್ರೀಗಳವರ ಸೇವಾ ಕಾರ್ಯವನ್ನು ಸ್ಮರಿಸಿಕೊಳ್ಳುವ ಉದ್ದೇಶದಿಂದ ಪ್ರತಿವರ್ಷ ಕಡೆಯ ಕಾರ್ತೀಕ ಸೋಮವಾರ ವಿಶೇಷ ಕಾರ್ಯಕ್ರಮವನ್ನು ವೇದಿಕೆ ವತಿಯಿಂದ ಹಮ್ಮಿಕೊಳ್ಳಲಾಗುವುದು. ಶ್ರೀಗಳು ತ್ರಿವಿಧ ದಾಸೋಹ ಸೇರಿದಂತೆ ಸಮಾಜ ಸೇವಾ ಕಾರ್ಯವನ್ನು ಸ್ಮರಿಸುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನ ಮಾಡಲಾಗುತ್ತದೆ" ಎಂದು ಹೇಳಿದರು.

ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು. ಸಚಿವರಾದ ಶ್ರೀ ಬಿ.ಸಿ. ನಾಗೇಶ್, ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ಮಾಜಿ ಸಚಿವ ಶ್ರೀ ಸೊಗಡು ಶಿವಣ್ಣ, ಚಿತ್ರನಟರಾದ ಶ್ರೀ ಡಾರ್ಲಿಂಗ್ ಕೃಷ್ಣ, ಅವರ ಪತ್ನಿ ನಟಿ ಶ್ರೀಮತಿ ಮಿಲನಾ ನಾಗರಾಜ್, ನಟ ಶ್ರೀ ಧರ್ಮಕೀರ್ತಿ, ವೀರಶೈವ ಲಿಂಗಾಯತ ವೇದಿಕೆ ಕಾರ್ಯದರ್ಶಿ ಶ್ರೀ ಪುಷ್ಪಕುಮಾರ, ಜಿಲ್ಲಾ ಗೌರವಾಧ್ಯಕ್ಷ ಶ್ರೀ ರುದ್ರೇಶ ಮೊದಲಾದವರು ಭಾಗವಹಿಸಿದ್ದರು.

ಶ್ರೀಮಠದ ಸಂಪ್ರದಾಯದಂತೆ ದಾಸೋಹ ವ್ಯವಸ್ಥೆ ಮಾಡಲಾಗಿತ್ತು. ರೈಸ್‌ಬಾತ್, ಪಾಯಸ, ಬೂದಿಯನ್ನು ಸಾವಿರಾರು ಭಕ್ತರು ಸವಿದರು.





ವರದಿ

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಡಾ. ಎಸ್. ಪರಮೇಶ್ ವಿರಚಿತ 'ಮಹಾಬಯಲು' ಕೃತಿ ಲೋಕಾರ್ಪಣೆ

ನವೆಂಬರ್ ೨೩ ರಂದು ತುಮಕೂರಿನಲ್ಲಿ, ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಹಾಗೂ ಬುಕ್‌ಬ್ರಹ್ಮ ಸಹಯೋಗದಲ್ಲಿ ಸಿದ್ಧಗಂಗಾ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರದ ವ್ಯವಸ್ಥಾಪಕ ನಿರ್ದೇಶಕರಾದ ಡಾ. ಎಸ್. ಪರಮೇಶ್ ಅವರು ಪರಮಪೂಜ್ಯ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ರಚಿಸಿದ 'ಮಹಾಬಯಲು' ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪ ಅವರು ಲೋಕಾರ್ಪಣೆ ಮಾಡಿದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಹಿರಿಯ ಜಾನಪದ ವಿದ್ವಾಂಸರು ಆದ ಡಾ. ಗೊ.ರು. ಚನ್ನಬಸಪ್ಪ ಅವರು ಮಾತನಾಡಿ "ಪೂಜ್ಯ ಲಿಂ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳು ಇಂದು ನಮ್ಮೊಂದಿಗಿಲ್ಲವಾದರೂ ಅವರ ಅಂತರಂಗದ ವಿಚಾರಧಾರೆ ನಮ್ಮೊಂದಿಗಿದೆ. ಪ್ರತಿವರ್ಷವೂ ಡಾ. ಪರಮೇಶ್ ಅವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಲ್ಲಿ ಅವರ ತಂದೆ ತಾಯಿಯಗಳ ಹೆಸರಿನಲ್ಲಿಟ್ಟಿರುವ ದತ್ತಿಯ ಮೂಲಕ ಪೂಜ್ಯ ಶ್ರೀಗಳವರನ್ನು ಸ್ಮರಿಸುವಂತಾಗಿದೆ. ಗಂಭೀರವಾಗಿ ಅವರ ಚಿಂತನೆಗಳನ್ನು ಗುರುತಿಸುವ ಕಾರ್ಯ ಇಂದು ಆಗಬೇಕಿದೆ. ಅವರ ವಿಚಾರಗಳನ್ನು ಅಧ್ಯಯನ ಮಾಡಿ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ" ಎಂದು ಹೇಳಿದರು.

ಅವರು ತಮ್ಮ ಭಾಷಣದಲ್ಲಿ "ಹನ್ನೆರಡನೆ ಶತಮಾನದ ದಾರ್ಶನಿಕ ಭಕ್ತಿಭಂಡಾರಿ ಬಸವಣ್ಣನವರನ್ನು ಕುರಿತು ಹರಿಹರ ಕವಿ ತನ್ನ ಬಸವರಾಜ ದೇವರ ರಗಳೆಯಲ್ಲಿ ನಿನ್ನ ಗುಣಾದಿಗಳನ್ನು ಬಣ್ಣಿಸಲು ಎನ್ನಳವಲ್ಲ ಎಂದು ಹೇಳುವ ಮೂಲಕ ಬಸವಣ್ಣನವರ ಮಾನವೀಯ ಗುಣಗಳನ್ನು ಎತ್ತಿ ಹಿಡಿದಿದ್ದಾನೆ. ಬಸವಣ್ಣನವರ ಗುಣಗಳನ್ನು ಲಿಂ. ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಳವಡಿಸಿಕೊಳ್ಳುವ ಮೂಲಕ ಸದ್ಗುಣಗಳ ಸಾಕಾರಮೂರ್ತಿಯಂತಿದ್ದರು" ಎಂದು ಹೇಳಿದರು. ಕೃತಿಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ಹಂಚಿಕೊಂಡ ಡಾ. ಗೊ.ರು.ಚ. ಅವರು "ಪೂಜ್ಯ ಶ್ರೀ ಶ್ರೀಗಳವರ ಅಂತಿಮ ದಿನಗಳಲ್ಲಿ ನೀಡಲಾಗಿದ್ದ ಚಿಕಿತ್ಸೆಯ ಬಗ್ಗೆ ತುಂಬಾ ಜನರಿಗೆ ತಿಳಿದಿಲ್ಲ. ಶ್ರೀಗಳಿಗೆ ನೀಡಿದ್ದ ಚಿಕಿತ್ಸೆ ಅದಕ್ಕೆ ಅವರು ಯಾವ ರೀತಿ ಸ್ಪಂದಿಸುತ್ತಿದ್ದರು ಮೊದಲಾದ ವಿಚಾರಗಳನ್ನು ಡಾ. ಪರಮೇಶ್ ಅವರು ಕೃತಿಯಲ್ಲಿ ದಾಖಲಿಸಿದ್ದಾರೆ. ಈ ಕೃತಿಗೆ ಮಹಾಬಯಲು ಎಂದು ಹೆಸರಿಟ್ಟಿರುವುದೇ ಒಂದು ರೋಮಾಂಚನಕಾರಿಯಾದ ವಿಷಯವಾಗಿದೆ" ಎಂದು ಹೇಳಿದರು.

ಕೃತಿಯನ್ನು ಲೋಕಾರ್ಪಣೆ ಮಾಡಿದ ಶ್ರೀ ಟಿ.ಕೆ. ನಂಜಂಡಪ್ಪನವರು ಮಾತನಾಡಿ "ಲೇಖಕರಾದವರು ತಮ್ಮ ಜೀವನದ ಅನುಭವದ ಹಿನ್ನೆಲೆಯಲ್ಲಿ ಕೃತಿ ರಚಿಸಿದರೆ ಅದು ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತದೆ.





ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಮಂಗಳ ನುಡಿ

ಡಾ. ಪರಮೇಶ್ ಅವರು ಸ್ವಾಮೀಜಿಯವರ ನೆರಳಿನಂತೆ ಅನುಸರಿಸಿದ ಅನುಭವಗಳ ದಾಖಲೆಯನ್ನು ಮನಮುಟ್ಟುವಂತೆ ಈ ಕೃತಿಯಲ್ಲಿ ದಾಖಲಿಸಿದ್ದಾರೆ" ಎಂದು ಶ್ಲಾಘಿಸಿದರು.

ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಪ್ರಜಾಪ್ರಗತಿಯ ಸಂಪಾದಕರಾದ ಶ್ರೀ ಎಸ್. ನಾಗಣ್ಣನವರು ಮಾತನಾಡಿ, "ನಾಡು ಕಂಡ ಅಪರೂಪದ ಪತ್ರಕರ್ತರಾದ ಪಾಟೀಲ್ ಪುಟ್ಟಪ್ಪನವರ ಜೊತೆ ಈ ಹಿಂದೆ ತಾನು ಮಠಕ್ಕೆ ಹೋಗಿದ್ದ ಸಂದರ್ಭವನ್ನು ಸ್ಮರಿಸಿಕೊಂಡು ಶ್ರೀಗಳು ಸಮಾಜದಲ್ಲಿರುವ ವ್ಯವಸ್ಥೆಯ ಲೋಪದೋಷಗಳ ಬಗ್ಗೆ ನಿಷ್ಠುರವಾಗಿ ಮಾತನಾಡುವ ಛಾತಿ ಹೊಂದಿದ್ದರು. ಜಾತಿ-ಭೇದ ಮಾಡದ ಅವರು ಗ್ರಾಮೀಣ ಜನರನ್ನು ಅತಿ ಹೆಚ್ಚು ಪ್ರೀತಿಸುತ್ತಿದ್ದರು. ಜಾತ್ರೆಯ ಸಂದರ್ಭದಲ್ಲಿ ಶ್ರೀಮಂತ ಭಕ್ತರು ಮಠಕ್ಕೆ ಕಳಿಸುತ್ತಿದ್ದ ಲೋಡುಗಟ್ಟಲೆ ದವಸ-ಧಾನ್ಯಗಳಿಗಿಂತಲೂ ಕುಂಬಳಕಾಯಿ, ಹುಣಸೆಹಣ್ಣು, ಕಾಳು-ಕಡ್ಡಿಗಳನ್ನು ಮಠದ ದಾಸೋಹಕ್ಕೆಂದು ತರುತ್ತಿದ್ದ ಹಳ್ಳಿಯ ಬಡಜನರ ಬಗ್ಗೆ ಶ್ರೀಗಳಿಗೆ ಅಪಾರ ಪ್ರೀತಿಯಿತ್ತು ಎಂದರಲ್ಲದೆ ಸಿರಿಂಜ್ ಹಿಡಿಯುವ ವೈದ್ಯರುಗಳು ಡಾ. ಪರಮೇಶ್ ಅವರ ರೀತಿ ಲೇಖನಿ ಹಿಡಿದರೆ ಜನರ ಅರ್ಧ ರೋಗಗಳನ್ನು ತಮ್ಮ ಬರವಣಿಗೆಯ ಮೂಲಕವೇ ವಾಸಿಗೊಳಿಸಬಹುದು ಎಂದು ಹೇಳುವ ಮೂಲಕ ಸಮಾಜಕ್ಕೆ ವೈದ್ಯ ಸಾಹಿತ್ಯದ ಅಗತ್ಯತೆ ಪ್ರಸ್ತುತ ಹೆಚ್ಚಿದೆ" ಎಂದು ಅಭಿಪ್ರಾಯಪಟ್ಟರು.

ಕೃತಿಯನ್ನು ಪರಿಚಯ ಮಾಡಿಕೊಟ್ಟ ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ವಿದ್ವಾನ್ ಎಂ.ಜಿ. ಸಿದ್ಧರಾಮಯ್ಯ ಅವರು "ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನವನ್ನು, ಅವರ ಶಿವಘನ ವ್ಯಕ್ತಿತ್ವವನ್ನು ಪರಿಚಯಿಸುವ ಕೃತಿ ಇದಾಗಿದೆ. ಲೇಖಕರಾದ ಡಾ. ಪರಮೇಶ್ ಅವರು ನಡೆದಾಡುವ ದೇವರು ಹಾಗೂ ಅವರ ಮಾನವೀಯ ಗುಣಗಳನ್ನು ಹಲವು ಮಜಲುಗಳಲ್ಲಿ ಅನಾವರಣ ಮಾಡಿದ್ದಾರೆ" ಎಂದು ಹೇಳಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ "ಡಾ. ಎಸ್. ಪರಮೇಶ್ ಅವರು ವೃತ್ತಿಯಲ್ಲಿ ವೈದ್ಯರಾದರೂ ಸಾಹಿತ್ಯದಲ್ಲಿ ಒಲವು ತೋರಿ ವೃತ್ತಿ ಹಾಗೂ ಪ್ರವೃತ್ತಿಗೆ ಪೂರಕವಾಗಿ ನಡೆಯುತ್ತಿದ್ದಾರೆ. ಪರಮಪೂಜ್ಯ ಲಿಂ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಚಿಂತನೆ ಬೆಳಕು ಚೆಲ್ಲುವ ಕೆಲಸ ಮಾಡಿ ಸ್ವಾಮೀಜಿಯವರೊಂದಿಗಿನ ಒಡನಾಟದ ಅವರ ಅನುಭವಗಳನ್ನು ಈ ಕೃತಿಯ ಮೂಲಕ ಹಂಚಿಕೊಂಡಿರುವುದು ಎಲ್ಲರಿಗೂ ಮಾದರಿಯಾಗಲಿದೆ. ಕೃತಿಗೆ 'ಮಹಾಬಯಲು' ಎಂದು ಹೆಸರಿಟ್ಟಿರುವುದು ಅರ್ಥಪೂರ್ಣವಾಗಿದೆ. ಪರಮ ಪೂಜ್ಯರ ವ್ಯಕ್ತಿತ್ವದ ದರ್ಶನವನ್ನು ಕೃತಿಯಲ್ಲಿ ಅನಾವರಣ ಗೊಳಿಸಿದ್ದಾರೆ. ಹಿರಿಯ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪನವರ ಜೀವನೋತ್ಸಾಹವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ" ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಸಿ. ಪರಮಶಿವಯ್ಯ ಅವರು ವಹಿಸಿದ್ದರು. ಪ್ರಾಸ್ತಾವಿಕ ನುಡಿಗಳನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಡಾ. ಸಿ.ರಾ. ಹೊನ್ನಲಿಂಗಯ್ಯ ಅವರು ನಡೆಸಿಕೊಟ್ಟರು.

ಕಾರ್ಯಕ್ರಮದ ಅಂಗವಾಗಿ ವಚನ ಗಾಯನ ಕಾರ್ಯಕ್ರಮವನ್ನು ತುಮಕೂರಿನ ಶರಣೆ ರಾಗಿಣಿ ಮತ್ತು ತಂಡದವರು ನಡೆಸಿಕೊಟ್ಟರು. ಡಾ. ಗೊ.ರು.ಚ. ಅವರ ಪರಿಚಯವನ್ನು ಶ್ರೀ ಎಸ್. ಶಿವಕುಮಾರಸ್ವಾಮಿ ಮಾಡಿ ಕೊಟ್ಟರು. ಕಾರ್ಯಕ್ರಮ ನಿರ್ವಹಣೆಯನ್ನು ಶ್ರೀ ಹೆಚ್.ಜಿ. ಸುರೇಶ್‌ಕುಮಾರ ಹಾಗೂ ಶ್ರೀ ಎಸ್.ವಿ. ರವೀಂದ್ರನಾಥ ಠಾಗೂರ್ ಅವರು ನಡೆಸಿಕೊಟ್ಟರು. ಶ್ರೀ ಮಾದಪುರ ಶಿವಪ್ಪ ಅವರು ಸ್ವಾಗತಿಸಿದರು. ನಿರೂಪಣೆಯನ್ನು ಜಿ.ಬಿ. ರೂಪಾ ಅವರು ಮಾಡಿಕೊಟ್ಟರು. ಶರಣು ಸಮರ್ಪಣೆಯನ್ನು ಡಾ. ವೀಣಾ ಪರಮೇಶ್ ಅವರು ಮಾಡಿದರು.



## ನೆನಪಿನಂಗಳದಿಂದ

# ಶ್ರೀ ಸಿದ್ಧಗಂಗಾ ಮಠವಿಲ್ಲದಿದ್ದರೆ ನಾವೇನಾಗುತ್ತಿದ್ದೆವು?

– ಕೋ.ರಂ. ಬಸವರಾಜು *

ಪ್ರತಿಯೊಬ್ಬರೂ ತಾನು ನಡೆದು ಬಂದ ಬದುಕಿನ ದಾರಿಯನ್ನು ಹಿಂದಿರುಗಿ ನೋಡಿಕೊಳ್ಳುವುದು ಉತ್ತಮ. ಅದನ್ನು ಆತ್ಮಕಥನದ ರೂಪದಲ್ಲಿ ದಾಖಲಿಸುವುದು ಅತ್ಯುತ್ತಮ. ಏಕೆಂದರೆ ಮುಂದಿನ ಪೀಳಿಗೆಗೆ ಅದು ಆದರ್ಶವಾಗಬಲ್ಲುದು. ತತ್ರಾಪಿ ಶ್ರೀ ಸಿದ್ಧಗಂಗಾಮಠದಲ್ಲಿ ಆಶ್ರಯ ಪಡೆದು ಮನುಷ್ಯರಾದ ಪ್ರತಿಯೊಬ್ಬರೂ ಅದನ್ನು ಬರೆದಿಡಬೇಕು. ಅಷ್ಟೇ ಅಲ್ಲ ಸಿದ್ಧಗಂಗಾಮಠವಿಲ್ಲದಿದ್ದರೆ ನಾನೇನಾಗುತ್ತಿದ್ದೆ ಎಂಬುದು ನಮ್ಮ ಬದುಕಿನ ಪುಸ್ತಕದ ಮೊದಲನೆಯ ಪುಟವಾಗಬೇಕು. ಇದರಿಂದ ನಮ್ಮ ಮುಂದಿನ ಪೀಳಿಗೆಗೆ ಮಕ್ಕಳು ಮೊಮ್ಮಕ್ಕಳಿಗೆ 'ನಮ್ಮ ಮನೆತನದ ಉದ್ಧಾರಕ್ಕೆ ಸಿದ್ಧಗಂಗಾ ಮಠವೇ ಮೂಲಕಾರಣ' ಎಂಬುದರ ಅರಿವಾದರೂ ಆದೀತು.

ಶ್ರೀ ಸಿದ್ಧಗಂಗಾಮಠವಿಲ್ಲದಿದ್ದರೆ ನಾವೇನಾಗುತ್ತಿದ್ದೆವು ಎಂಬುದನ್ನು ಈಗ ಊಹಿಸಲೂ ಸಾಧ್ಯವಿಲ್ಲ. ಸುಮ್ಮನೆ ಕ್ಷಣಹೊತ್ತು ಕಣ್ಮುಚ್ಚಿ ನೆನೆಸಿಕೊಂಡರೆ ಸಾಕು. ಹಿಂದಿನ ಬದುಕಿನ ಚಿತ್ರವೇ ಕಣ್ಮುಂದೆ ಬಂದು ನಿಲ್ಲುತ್ತದೆ. ನಾವೆಷ್ಟೋ ಮಂದಿ ಕೂಲಿ ಹಮಾಲಿಗಳಾಗುತ್ತಿದ್ದೆವು. ಇಲ್ಲವೆ ಮೂಳೆ ಚಕ್ಕಳವಿಲ್ಲದ ರೈತರಾಗಿರುತ್ತಿದ್ದೆವು. ಬಡತನದ ಕೂಪದಲ್ಲಿ ಬಿದ್ದಿರುತ್ತಿದ್ದೆವು. ಬರಗಾಲದ ಬೇಗೆಯಲ್ಲಿ ಬೆಂದು ಹೋಗುತ್ತಿದ್ದೆವು. ಈವೊತ್ತು ಮಹಾರಾಷ್ಟ್ರದಿಂದಲೊ ಉತ್ತರಕರ್ನಾಟಕದಿಂದಲೊ ಗುಳೆಬಂದು ಇಲ್ಲಿ ರಸ್ತೆಕೆಲಸ, ಕಟ್ಟಡದ ಕೆಲಸವನ್ನು ಮಾಡುವವರಿಗಿಂತಲೂ ನಮ್ಮ ಬದುಕು ಭಿನ್ನವಾಗಿರುತ್ತಿರಲಿಲ್ಲ. ನಮ್ಮೆಲ್ಲರಿಗೂ ಗೊತ್ತು ನಮ್ಮ ಹಿಂದಿನ ಪರಿಸ್ಥಿತಿ. ಗಂಜಿಗೂ ಗತಿಯಿಲ್ಲದ ಕಿತ್ತು ತಿನ್ನುವ ದಟ್ಟದರಿದ್ರತನ. ನಿಜ ಹೇಳಬೇಕೆಂದರೆ ನಾವು ಬಹಳಷ್ಟು ಮಂದಿ ಹಳೆಯ ವಿದ್ಯಾರ್ಥಿಗಳು ಭಾಗ್ಯವನ್ನು ನೆತ್ತಿಯಲ್ಲಿ ಹೊತ್ತು ಹುಟ್ಟಿಬಂದವರಲ್ಲ. ದಾರಿದ್ರ್ಯವನ್ನು ಹೊದ್ದು ಹುಟ್ಟಿಬಂದವರು. ನನ್ನ ವಿಷಯದಲ್ಲಿ ಹೇಳುವುದಾದರೆ ನಾನು ಹುಟ್ಟಿದ ಕೆಲವೇ ತಿಂಗಳಲ್ಲಿ ನನ್ನ ತಂದೆ ತೀರಿಕೊಂಡರು. ನಾನು ಆಗಲೇ ಅನಾಥನಾದವನು. ಅವ್ವಕೊಟ್ಟ ಅರ್ಧರಾಗಿ ರೊಟ್ಟಿಯೇ ದಿನದ ಫುಲ್‌ಮೀಲ್ಸ್. ಹೊಟ್ಟೆಗಿದ್ದರೆ ಬಟ್ಟೆಗಿಲ್ಲ. ಬಟ್ಟೆಗಿದ್ರೆ ಹೊಟ್ಟೆಗಿಲ್ಲ. ಇದರ ಜೊತೆಗೆ ಮನೆತುಂಬ ಮಕ್ಕಳು. ಹೇಳಬೇಕೆಂದರೆ ಯುಗಾದಿಯೋ ಗೌರಿ ಹಬ್ಬವೋ ಬಿಟ್ಟರೆ ಅನ್ನದ ಮುಖವನ್ನೇ ಕಂಡಿರಲಿಲ್ಲ. ಸಿದ್ಧಗಂಗೆಗೆ ಸೇರಿದ ನಂತರವೇ ನಿತ್ಯ ಅನ್ನ ಉಂಡದ್ದು. ಇನ್ನು ವರ್ಷಕ್ಕೊಂದು ಸಾರಿ ಬರುವ ಯುಗಾದಿಯಲ್ಲಿ ಅಮ್ಮ ಸಾಲಸೋಲ ಮಾಡಿ ಸಂತೆಯಿಂದ ಒಂದು ಮಾರ್ಗಿ ಅಂಗಿ ತಂದುಕೊಟ್ಟರೆ ಅದೇ ನಮಗೆ ವರ್ಷವಿಡೀ ಉಡುವ ದಿವ್ಯಾಂಬರ, ಪೀತಾಂಬರ. ನಮ್ಮ ಮಾಳಿಗೆ ಮನೆಯೊ! ಶಿವನಿಗೆ ಪ್ರೀತಿ. ನಮ್ಮ ಮನೆಯನ್ನು ನೋಡಿಯೇ 'ದೇಹಲೀ ದೀಪನ್ಯಾಯ' ಎಂಬ ಲೋಕನ್ಯಾಯ ಹುಟ್ಟಿತೋ ಏನೋ! ಇತ್ತ ನಡುಮನೆ, ಅತ್ತ ಕೊಟ್ಟಿಗೆಮನೆ, ಇತ್ತ ಜನ, ಅತ್ತ ದನ. ಜಗಲಿಯ ಮೇಲೆ ಹಚ್ಚಿಟ್ಟ ಸೀಮೆ ಎಣ್ಣೆ ಬುಡ್ಡಿ. ಮಲಗಿದರೆ ತಲೆಯ ಮೇಲೆ ಮಾಳಿಗೆ ಮಣ್ಣಿನ ಸಿಂಚನ. ಕೆಳಗೆ ಕಾಲಿಗೆ ಗಂಜಲದ ಲೇಪನ. ಇನ್ನು ನಮ್ಮ ಮನೆಗಳ ಪರಿಸರದ ಕೊಳಕೋ! ಇಂದಿನ ನಗರಗಳಲ್ಲಿನ ಕೊಳಗೇರಿಯನ್ನು ನಾಚಿಸುವಂತಿತ್ತು. ಇದು ನನ್ನೊಬ್ಬನ ಸ್ಥಿತಿಯ ವರ್ಣನೆಯಲ್ಲ, ನನ್ನಂತಹ ಅನೇಕರ ನಿಜಸ್ಥಿತಿಯ ವರ್ಣನೆ.

ಆದರೆ ನಾವಿಂದು ಏನಾಗಿದ್ದೇವೆ? ಹೇಗಿದ್ದೇವೆ? ವಿದ್ಯಾವಂತರಾಗಿದ್ದೇವೆ. ಉದ್ಯೋಗಸ್ಥರಾಗಿದ್ದೇವೆ. ದುಡಿಮೆಮಾಡಿ ಸಂಪಾದಿಸುತ್ತಿದ್ದೇವೆ. ಅಂದವಾದ ಮನೆಮಠಗಳನ್ನು ಕಟ್ಟಿಕೊಂಡಿದ್ದೇವೆ. ಸಂಸ್ಕಾರವಂತರಾಗಿದ್ದೇವೆ. ಧನಿಕರನ್ನೂ ಮೀರಿಸುವಂತಹ ವೇಷಾಭರಣಗಳನ್ನು ಧರಿಸುತ್ತಿದ್ದೇವೆ. ಶ್ರೀಮಂತರಿಗಿಂತಲೂ ಹೆಚ್ಚಾಗಿ ನಮ್ಮ ಮಕ್ಕಳನ್ನು

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

ತಾನು ಏನು ಮಾತನಾಡಬೇಕೆಂಬುದು ತಿಳಿದಿರುವುದಿಲ್ಲ. ಮಾತನಾಡುವಾಗ ತಾನು ಏನು ಮಾತನಾಡುತ್ತಿದ್ದೇನೆಂಬ ಅರಿವಿರುವುದಿಲ್ಲ. ಮಾತನಾಡಿದ ನಂತರ ತಾನು ಏನು ಮಾತನಾಡಿದೆ ಎಂಬುದರ ನೆನಪಿರುವುದಿಲ್ಲ" ಎಂದಿದ್ದರಂತೆ. ಆ ವರ್ಗಕ್ಕೆ ಸೇರಿದ ಮಾತುಗಾರರು ನಮ್ಮಲ್ಲಿ ಸಾಕಷ್ಟು ಜನ ಇದ್ದಾರೆ.

ಅದರಲ್ಲೂ ದೇವರು, ಧರ್ಮ, ಅನುಭಾವ ಕುರಿತು ಪ್ರವಾಹದಂತೆ ಪ್ರವಚನ-ಉಪನ್ಯಾಸ ಮಾಡುವವರನ್ನು ಕಂಡೇ ಮಧುವಯ್ಯ ಈ ವಚನ ಹೇಳಿರಬೇಕು. ಏಕೆಂದರೆ, ಅಂತಹ ಮಾತುಗಾರರಿಗೆ ದೇವರು, ಧರ್ಮ, ಅನುಭಾವ - ಇವಾವುಗಳ ಅನುಭವವೂ ಆಗಿರುವುದಿಲ್ಲ. ಸುಮ್ಮನೆ ತಮ್ಮ ಮಾತಿನ ಮಾಲೆ ಕಟ್ಟುತ್ತಾ ಹೋಗುತ್ತಾರೆ; ಅಂಥವರ ಮಾತುಗಳನ್ನು ಮುಗ್ಧರು ಕೇಳುತ್ತಾ ಹೋಗುತ್ತಾರೆ.

ಬಾಲಸಂಗಯ್ಯನಂತಹ ವಚನಕಾರನಂತೂ "ಎಲ್ಲರೂ ಮಾತಿನಿಂದ ಮರಣವಾದರು" ಎನ್ನುತ್ತಾನೆ. ಏಕೆಂದರೆ, ಅವರ ಮಾತುಗಳೆಲ್ಲ ಅರ್ಥಹೀನವಾಗಿರುತ್ತವೆ, ಕೇವಲ ಶಬ್ದಾಡಂಬರಗಳಾಗಿರುತ್ತವೆ. ಅದನ್ನೇ ಮಧುವಯ್ಯ ಅಂತಹ ಮಾತುಗಳಿಂದ 'ಅರ್ಕೇಶ್ವರನೆಂಬ ಅದೃಶ ಚೇತನವನ್ನು ಅರಿಯಲು ಸಾಧ್ಯವೇ' ಎಂದು ಕೇಳುತ್ತಾನೆ.

ನಮ್ಮ ಮಾತುಗಳು ತಲೆಯಿಂದ ಮೂಡಿ ಬರಬಾರದು; ಹೃದಯದಿಂದ ಮೂಡಿಬರಬೇಕು. ತಲೆಯಿಂದ ಬರುವ ಮಾತುಗಳು ಕೇಳಿದವರು ತಲೆಯಾಡಿಸುವಂತೆ ಇರಬಹುದು. ಆದರೆ ಅವರಿಗೆ ನಿಜದ ನೆಲೆಯ ದರ್ಶನವಾಗುವುದಿಲ್ಲ. ಹೃದಯದಿಂದ ಹೊಮ್ಮಿದ ಮಾತುಗಳು ಮಾತ್ರ ಕೇಳುಗರ ಹೃದಯವನ್ನು ಮಿಡಿಯಬಲ್ಲವು. ಮಾತಿನ ಈ ಮಹತ್ವವನ್ನು ಕಂಡೇ ಶರಣರು 'ಮಾತೇ ಜ್ಯೋತಿರ್ಲಿಂಗ' ಎಂದಿರುವುದು.

ಮಧುವಯ್ಯ ಇಲ್ಲಿ ಹೇಳುವಂತೆ ಕೇವಲ ಮಾತಿನಿಂದ ಭಗವತ್ ಚೇತನವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಭಕ್ತಿಯ ಶ್ರದ್ಧೆಬೇಕು; ಸಮರ್ಪಣ ಭಾವವಿರಬೇಕು. ಮೊದಲು ತನ್ನನ್ನು ತಾನು ಮರೆತಿರಬೇಕು ಎನ್ನುವುದು ಅವನ ವಿಚಾರ. ಆದರೆ, ಇಂದು ಇದಾವುದೂ ಇಲ್ಲದೆ ಸ್ವಪ್ರತಿಷ್ಠೆಯ ಪ್ರದರ್ಶನದಲ್ಲಿ ಮೆರೆಯುವವರೇ ಹೆಚ್ಚು. ಅದರಲ್ಲೂ ಕಲಿತವರೆನ್ನುವವರು ಮತ್ತು ರಾಜಕಾರಣಿಗಳಲ್ಲಿ ಈ ಹುಚ್ಚು ಹೆಚ್ಚಾಗಿರುತ್ತದೆ. ಅವರ ದೃಷ್ಟಿ ಅರ್ಕೇಶ್ವರನ ಅರಿವಿಲ್ಲ; ಪ್ರಸಿದ್ಧಿಯ ಗುರಿಯಷ್ಟೆ. ಅದರಲ್ಲೂ ಚುನಾವಣೆ ಸಂದರ್ಭಗಳಲ್ಲಿ ಅವರು ಭರವಸೆಗಳ ಬಿರುಗಾಳಿಯನ್ನೇ ಬೀಸುತ್ತಾರೆ. ಮಾತಿನ ಭರದಲ್ಲಿ ನದಿ ಇಲ್ಲದ ಕಡೆಯಲ್ಲೂ ಸೇತುವೆ ನಿರ್ಮಿಸುವ ಭರವಸೆ ಕೊಡುತ್ತಾರೆ! ಆದರೆ, ಮತಿವಂತ ಮತದಾರರು ಮಾತ್ರ ಅಂತಹ ಟೊಳ್ಳು ಮಾತುಗಳನ್ನು ನಂಬದೆ ಅವರಿಗೆ ಪಾಠ ಕಲಿಸಬಲ್ಲರು. ಜನ ವಿಶ್ವಾಸಕ್ಕೆ ಬೇಕಾಗುವುದು ಮಾತಲ್ಲ; ಕೃತಿ, ಮಾತಿನ ಅಮಲಿನಲ್ಲಿ ಹುಚ್ಚು ಹುಚ್ಚಾಗಿ ಮಾತನಾಡಿ ಸಮುದಾಯದ ನೆಮ್ಮದಿಯನ್ನೇ ಹಾಳುಮಾಡುವ 'ಮಾತಿನ ಮಾಲೆ' ಕಟ್ಟುವವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಆದರೆ, ಅವರೆಂದೂ 'ಅನಂತ'ವನ್ನು ಅರ್ಥಮಾಡಿಕೊಳ್ಳಲಾರರು.

ನಮ್ಮ ಲೌಕಿಕ ಬದುಕಿಗೆ ಮಾತು ಅಗತ್ಯವಾಗುತ್ತದೆ; ಅನಿವಾರ್ಯವಾಗುತ್ತದೆ ಎಂಬುದೇನೋ ಸಹಜ. ಆದರೆ ಆ ಮಾತು ಮಾಗಿದ ಹೃದಯದಿಂದ ಹೊಮ್ಮಿದರೆ ಶ್ರೋತೃವಿನ ಹೃದಯವನ್ನೇ ತಾಗುತ್ತದೆ. ಇಲ್ಲವಾದರೆ, ಅಲ್ಲಮ ಹೇಳುವಂತೆ 'ಆ ಮಾತು, ಈ ಮಾತು, ಹೋ ಮಾತು' ಆಗುತ್ತದೆ. ಗೊತ್ತು ಗುರಿಯಿಲ್ಲದೆ ಬಿಟ್ಟ ಬಾಣವಾಗುತ್ತದೆ. ಎಷ್ಟೋ ಸಲ ಆ ದಿಕ್ಕುಗೆಟ್ಟ ಬಾಣ ತಗಲಿ ಅಮಾಯಕರು ನೋವು ಅನುಭವಿಸಬೇಕಾಗುತ್ತದೆ. ಅಪಕ್ವ ವ್ಯಕ್ತಿ ಆಡುವ ಮಾತು ಅಪಾರ್ಥಕ್ಕೆ ಈಡಾಗುವುದೇ ಹೆಚ್ಚು. ಅಪಾರ್ಥದ ಮಾತುಗಳಿಗೆ ಬರುವ ಪ್ರತಿಕ್ರಿಯೆಯೂ ಅನರ್ಥಕಾರಿಯೇ ಆಗಿರುತ್ತದೆ. ಇದಕ್ಕೆ ನಮ್ಮ ಕಾಲದ ಕೆಲವು 'ಮಾತು ಬಲ್ಲವರ' ಮಾತುಗಳೇ ಸಾಕ್ಷಿಯಾಗಿವೆ. ತಾವು ಮಾತು ಬಲ್ಲವರೆಂದು ಮನಸ್ಸೀ ಮಾತನಾಡುವವರಿಂದ ಸಂಭವಿಸುವ ಅನಿಷ್ಟಗಳು ಅಷ್ಟಿಷ್ಟಲ್ಲ. ಅವರಿಗೆ ತಾವು ಎಲ್ಲ ಬಲ್ಲವರೆಂಬ ಅಹಂಕಾರ ವಿರುತ್ತದೆ. ಒಂದಲ್ಲ ಒಂದು ದಿನ ತಾವೇ ಆ ಅಹಂಕಾರಕ್ಕೆ ಬಲಿಯಾಗುತ್ತೇವೆಂಬ ಪ್ರಜ್ಞೆಯೂ ಅವನಿಗಿರುವುದಿಲ್ಲ. ಅಹಂಕಾರವಿರುವವರೆಗೂ ಅರ್ಕೇಶ್ವರನ ಅರಿವು ಸಾಧ್ಯವಿಲ್ಲ ಎನ್ನುವ ಕಾರಣದಿಂದಲೇ ಮಧುವಯ್ಯನ ಮಾತು ಜ್ಯೋತಿರ್ಲಿಂಗ !

ಸಲ್ಲದ ಮಾತಿಗಿಂತ ಸಲ್ಲುವ ಮಾತನಾಡುವುದನ್ನು ನಾವು ಕಲಿಯಬೇಕು. ಅದು ಸಾಧ್ಯವಾಗುವುದು ಮುಕ್ತ ಮನಸ್ಸಿನಿಂದ; ಸದುವಿನಯದಿಂದ. ಅಹಂಕಾರದ ಒಂದು ಸಣ್ಣ ಸುಳಿ ಇದ್ದರೂ ಅದು ಗುರಿ ಸಾಧಿಸಲು ಆತಂಕವೊಡ್ಡುತ್ತದೆ. ಮೊದಲೇ ಹೇಳಿದಂತೆ, ನಮ್ಮ ಮಾತಿನಲ್ಲಿ 'ನಾನು' ಇರಬಾರದು. ತೆರೆದ ಹೃದಯದಿಂದ ಮಾತನಾಡಬೇಕು. ನಮ್ಮ ಮಾತು ಇನ್ನೊಬ್ಬರಿಗೆ ಒಳಿತು ಮಾಡುವಂತಿರಬೇಕು. ಅರಿವು-ಅನುಭಾವಿಗಳ ಆಶಯವೇ ಅದು.

ಶರಣ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತಂತೆ ನಮ್ಮದೂ 'ಮಾತಿನ ಮಾಲೆ'ಯ ನುಡಿಯಾಗಿದೆ ಎನಿಸುತ್ತದೆ. ನುಡಿದಂತೆ ನಡೆಯುವ ಬಗೆಗೆ ನಾವು ಆತ್ಮನಿರೀಕ್ಷೆ ಮಾಡಿಕೊಳ್ಳಬೇಕಾಗಿದೆ.



ಲೇಖನ

# ದಲಿತೋದಯದ ಡಿಂಡಿಮ ಬಾರಿಸಿದ ಬಸವಯುಗ

- ಡಾ॥ ದೇ. ಜವರೇಗೌಡ, ಮೈಸೂರು

ಭರತಖಂಡ ಜಾತಿಮತಗಳ ಮೃಗಾಲಯವಾಗಿದೆ; ದೇವ ದೇವತೆಗಳ ಮ್ಯೂಸಿಯಮ್ಮಾಗಿದೆ. ಇಲ್ಲಿ ಎಷ್ಟು ಜಾತಿ ಮತಗಳಿವೆಯೋ ಅಷ್ಟು ರಾಷ್ಟ್ರೀಯತೆಗಳಿವೆ. ಜಾತಿ ಮತಗಳ ಕಲಹಗಳೇ ಭಾರತೀಯ ಇತಿಹಾಸವಾಗಿದೆ. ಅವು ಎಂದಾದರೂ, ಹೇಗಾದರೂ ಉಗಮಗೊಂಡಿರಲಿ, ಉಚ್ಚವರ್ಣೀಯರ ಸ್ವಾರ್ಥಪರತೆ, ಪಟ್ಟಭದ್ರ ಹಿತಾಸಕ್ತಿ, ಶೋಷಕ ಪ್ರವೃತ್ತಿ ಮತ್ತು ಕೌಟಿಲ್ಯ ನೀತಿಗಳೇ ಅವುಗಳ ಉಗಮಕ್ಕೆ ಕಾರಣವಾದುವೆಂಬುದಂತೂ ಸತ್ಯ. ಬುದ್ಧ ಮಹಾವೀರರಂಥವರು ಅವುಗಳನ್ನು ತೊಡೆಯುವುದಕ್ಕೆಂದು ಮಾಡಿದ ಪ್ರಯತ್ನ ಪೂರ್ಣ ಫಲಕಾರಿಯಾಗದಿರುವುದಕ್ಕೆ ಮೇಲು ವರ್ಗದವರ ಕುತಂತ್ರವೇ ಕಾರಣ. ವಿದೇಶೀಯ ಮತಗಳ ಪ್ರಾಬಲ್ಯಕ್ಕೆ, ಪರಕೀಯರ ಆಕ್ರಮಣಕ್ಕೆ ಜಾತಿಮತಗಳ ಬಾಹುಳ್ಯವೇ ಮೂಲಭೂತ ಕಾರಣವೆಂಬುದನ್ನು ಮರೆಯಲಾಗದು.

ಸರ್ವೋದಯಾಸಕ್ತರೂ ತ್ರಿಕಾಲ ಜ್ಞಾನಿಗಳೂ ಆದ ಪ್ರವಾದಿ ಬಸವಣ್ಣನವರು ಸಮಾಜದ ಅಂಗಗಳನ್ನು ವ್ಯಾಪಿಸಿಕೊಳ್ಳುತ್ತಿದ್ದ ಜಾತೀಯತೆಯೆಂಬ ಅರ್ಬುದ ವ್ರಣದ ಭೀಕರತೆಯನ್ನು ತೀವ್ರವಾಗಿ ಗಮನಿಸುತ್ತಾರೆ. ನಾಡಿನ ಭದ್ರತೆಗೆ, ಸಮಾಜದ ಕ್ಷೇಮಕ್ಕೆ ಜಾತೀಯತೆ ಅಪಾಯಕಾರಿಯೆಂಬುದನ್ನವರು ಮನಗಾಣುತ್ತಾರೆ. ಮಾನವೀಯ ಹೃದಯವುಳ್ಳ ಅವರು ಬೌದ್ಧಿಕವಾಗಿ ಆರ್ಥಿಕವಾಗಿ ಬಲಿಷ್ಠರಾಗಿದ್ದ ನೃಶಂಸರ ಶೋಷಣೆಗೆ ಗುರಿಯಾಗಿದ್ದ ದೀನ ದಲಿತರ ದಾರುಣ ಪರಿಸ್ಥಿತಿಯನ್ನೂ, ಪಶುಗಳಿಗಿಂತ ಕಡೆಯಾದ ಅವರ ಬಾಳನ್ನೂ ಕಂಡು ಕನಿಕರಿಸುತ್ತಾರೆ. ಪರಿತಾಪಗೊಳ್ಳುತ್ತಾರೆ. ಸಕಲ ಸಾಮಾಜಿಕ ರೋಗರುಜಿನಗಳಿಗೆ ಜಾತಿ ವಿನಾಶವೇ ಹಿರಿಮದ್ದೆಂದೂ, ಕಾರಣ ವಿನಾಶದಿಂದ ಕಾರ್ಯನಿರೋಧ ಸಾಧ್ಯವೆಂದೂ, ಸಾಮಾಜಿಕ ಅಥವಾ ಸಾಂಸ್ಕೃತಿಕ ಕ್ರಾಂತಿ ಜತೆ ಜತೆಯಾಗಿ ನಡೆಯದಿದ್ದರೆ ಉಳಿದ ಕ್ರಾಂತಿಗಳು ಪರಿಣಾಮಕಾರಿಯಾಗುವುದಿಲ್ಲವೆಂದೂ, ಅವರ ಸೂಕ್ಷ್ಮಮತಿ ನಿರ್ಧರಿಸುತ್ತದೆ. ಇಂದಿನ ನಾಯಕರಂತೆ ಅವರು ಬರಿಯ ಬಾಯ್ಗಲಿಯಲ್ಲ. ನಡೆಗಲಿಯೂ ಅಹುದು. ತಾವು ಉತ್ತಮ ಕುಲದಲ್ಲಿ ಹುಟ್ಟಿದ್ದೇ ಮಹಾಪರಾಧವಾಯಿತೆಂದು ಚಡಪಡಿಸುತ್ತಾರೆ. ಆತ್ಮಶೋಧನೆಗೆ ತೊಡಗುತ್ತಾರೆ. 'ಕಷ್ಟಜಾತಿಯ ಜನ್ಮದಲ್ಲಿ ಜನಿಸಿಹೆ; ಎನಗಿದು ವಿಧಿಯೆ! ಕೂಡಲ ಸಂಗಮದೇವಾ!' ಎಂದು ಆರ್ತನಾದಗೈಯ್ಯುತ್ತಾರೆ. ಅದಕ್ಕೆ ಪ್ರಾಯಶ್ಚಿತ್ತವೇನು? ಡೋಹರ ಕಕ್ಕಯ್ಯನನ್ನು ಅಪ್ಪನೆಂದು, ಚೆನ್ನಯ್ಯನನ್ನು ಮುತ್ತಯ್ಯನೆಂದು ಕೊಂಡಾಡಿ ಶ್ವಪಚಯ್ಯನ ಸಂಪರ್ಕದಿಂದ ಭಕ್ತಿಯ ಸದ್ಗುಣವನ್ನರಿಯುವುದಾದರೆ ಮಾತ್ರ ತನ್ನ ಹಿಂದಣ ಕುಲದ ಕಿಲುಬು ಹರಿದೀತೆಂದು ಅವರು ಕೊರಗುತ್ತಾರೆ. ಅವರು ಉತ್ತಮ ಕುಲದಲ್ಲಿ ಹುಟ್ಟಿದವರೆಂಬ ಕಾರಣಕ್ಕಾಗಿ ಕಕ್ಕಯ್ಯ ದಾಸಯ್ಯ ಚೆನ್ನಯ್ಯರು ಅವರೊಡನೆ ಸಲುಗೆಯಿಂದ, ವಿಶ್ವಾಸದಿಂದ ವರ್ತಿಸುತ್ತಿರಲಿಲ್ಲವೆಂದು, ಯಾವಾಗಲೂ ಅವರಿಂದ ಮಾರು ದೂರವಿರುತ್ತಿದ್ದರೆಂದು ತೋರುತ್ತದೆ. ಮೊದಮೊದಲು ದೀನದಲಿತರು ಅವರನ್ನು ಸಂದೇಹದಿಂದಲೇ ಕಾಣುತ್ತಿದ್ದಿರಬೇಕು. ಅದರಿಂದಾಗಿ ಅವರು 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ' ಎಂದು ಬೇಡುತ್ತಾರೆ, ಮದಗಳಲ್ಲೆಲ್ಲ ಕುಲಮದವೇ ಕ್ರೂರವಾದ್ದರಿಂದ ಅವರಿಗೆ ಚಿಂತೆ, 'ಕುಲಮದವಳಿಯದನ್ನಕ್ಕ ಶರಣನಾಗಲೇಕೆ?' ಎಂದು ತಮಗೆ ತಾವೇ ಪ್ರಶ್ನೆ ಹಾಕಿಕೊಳ್ಳುತ್ತಾರೆ. ಹಾರುವನ ಭಕ್ತಿಯನ್ನು ಗೇಲಿ ಮಾಡುತ್ತಾರೆ. 'ವಿಪ್ರರು ನುಡಿದಂತೆ ನಡೆಯರು.... ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ' ಎಂದು ಹಂಗಿಸುತ್ತಾರೆ. ಹಾರುವರ ಗುಟ್ಟು ಹಾರುವರಿಗಲ್ಲದೆ ಬೇರೆಯವರಿಗೆ ತಿಳಿಯಲಾರದಷ್ಟೆ! ಸತ್ಯಕ್ಕಲ್ಲದೆ, ಶರಣರಿಗಲ್ಲದೆ, ಇತರರಿಗೆ ಅಂಜದ ಬಸವಣ್ಣನವರು ಹಾರುವರ ಮಾನವನ್ನು ಆಡುಹಗಲಿನಲ್ಲಿ ಬೀದಿಯಲ್ಲಿ ಬಿಕರಿ ಮಾಡುತ್ತಾರೆ. ನಾಡಿನ ಸಕಲ ವಿಪತ್ತುಗಳಿಗೆ ಜಾತೀಯತೆಯೇ ಕಾರಣ, ಅದಕ್ಕೆ ವಿಪ್ರರೇ ಕಾರಣ ಎನ್ನುವುದನ್ನು ಅವರು ಅನೇಕ ರೀತಿಗಳಲ್ಲಿ, ಪುನರಾವರ್ತನೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ.

ಜಾತೀಯತೆ ಹರಿಯದಿದ್ದರೆ ಸಮಾನತೆ ಸ್ವಾತಂತ್ರ್ಯ ಭ್ರಾತೃತ್ವಗಳು ಗಗನ ಕುಸುಮಗಳಾಗುತ್ತವೆಂದೂ, ರಾಜಕೀಯ ಜೀವನ ಶುದ್ಧವಾಗುವುದಿಲ್ಲವೆಂದೂ, ಆರ್ಥಿಕ ಪ್ರಗತಿ ಸಾಧ್ಯವಿಲ್ಲವೆಂದೂ ಅವರು ಬಗೆದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಅಸ್ಪೃಶ್ಯತೆ ನಿರ್ಮೂಲನಗೊಂಡಾಗಲೇ ಜಾತಿವಿನಾಶ ಸಾಧ್ಯವೆಂಬ ಅರಿವು ಅವರಿಗಿದ್ದಿರಬೇಕು. ಆದ್ದರಿಂದಲೇ ಅವರು ದಿನದಿನವೂ ಆ







ವಿಷಯವನ್ನು ಕುರಿತು ಚಿಂತಿಸುತ್ತಾರೆ. ಸಹಭೋಜನ ಮತ್ತು ಅಂತರ್ಜಾತೀಯ ವಿವಾಹಗಳಿಂದಲ್ಲದೆ ಅಸ್ಪೃಶ್ಯತೆಯ ನಿವಾರಣೆ ಸಾವಿರ ವರ್ಷಗಳಾದರೂ ಸಾಧ್ಯವಾಗದೆಂದು ಅವರು ನಿರ್ಣಯಿಸುತ್ತಾರೆ. ಅದು ನಿವಾರಣೆಯಾಗದೆ ನ್ಯಾಯ ಧರ್ಮ ಮರುಕ ಅನುಕಂಪೆ ಸಹಾನುಭೂತಿ ಭೂತದಯಾ ಪಶ್ಚಾತ್ತಾಪ ಮಾನವೀಯತೆ ಮೊದಲಾದ ಯಾವ ಮೌಲ್ಯಗಳಿಗೂ ಅರ್ಥವಿರಲಾರದೆಂದು ಖಡಾಖಂಡಿತವಾಗಿ ಘೋಷಿಸುತ್ತಾರೆ. ಅಸ್ಪೃಶ್ಯತೆ ಹಿಂದೂ ಧರ್ಮಕ್ಕಂಟಿಕೊಂಡು ಬಂದಿರುವ ಅಭಿಶಾಪವೆಂದು, ಅದರಿಂದ ವಿಮೋಚನೆಗೊಳ್ಳದಿದ್ದರೆ ಭಾರತೀಯರು ತಮ್ಮ ಸಮಾಧಿಯನ್ನು ತಾವೇ ತೋಡಿಕೊಳ್ಳಬೇಕಾಗುತ್ತದೆಂದೂ, ಶುದ್ಧಿಕರಣವಾಗಬೇಕಾದದ್ದು ಸರ್ವರ್ಣೀಯರಿಗೆ ಹೊರತು ಅಸ್ಪೃಶ್ಯರಿಗಲ್ಲವೆಂದೂ ಭರತ ಖಂಡದಲ್ಲಿ ಪ್ರಪ್ರಥಮವಾಗಿ ಘೋಷಿಸಿದವರು ಗಾಂಧೀಜಿಯುವರಲ್ಲ.* ಬಸವಣ್ಣನವರೆಂಬುದನ್ನು ಲೋಕ ತಿಳಿದಿರಬೇಕು. ಅವರು ಹಾಗೆ ಘೋಷಿಸಿದ್ದು ಮಾತ್ರವಲ್ಲ, ತ್ರಿಕರಣಶುದ್ಧಿಯಾಗಿ ಅನುಷ್ಠಾನಕ್ಕೆ ತರುತ್ತಾರೆ.

ಶಿವನಾಗಮಯ್ಯನ ಮನೆಯಲ್ಲಿ ಪ್ರಸಾದ ಸ್ವೀಕರಿಸಿದ್ದು ಮಾತ್ರವಲ್ಲ, ಮಾದಾರ ಚೆನ್ನಯ್ಯ ಮತ್ತು ಡೋಹಾರ ಕಕ್ಕಯ್ಯರಲ್ಲಿಟ್ಟಿದ್ದ ಪ್ರೀತಿ ಗೌರವಗಳೇ ಅವರ ಪ್ರಾಮಾಣಿಕತೆಗೆ ಸಾಕ್ಷಿಯಾಗಿವೆ. 'ನಡೆನುಡಿ ಸಿದ್ಧಾಂತದಲ್ಲಿ ಕುಲಹೊಲೆ ಸೂತಕವಿಲ್ಲ..... ಆಚಾರವೆ ಕುಲ, ಅನಾಚರವೆ ಹೊಲೆ' ಎಂದು ನಂಬಿದ್ದ, ತಾನು ಸವಿನೋಡಿದ ಅಂಬಲಿಯನ್ನು ನೀಡಿ ಶಿವನನ್ನು ಒಲಿಸಿಕೊಂಡಿದ್ದ, ಸಿದ್ಧಿಯ ಸೋಪಾನನ್ನೇರಿದ್ದ, ಹೆಸರನ್ನು ಅನ್ವರ್ಥಗೊಳಿಸಿಕೊಂಡಿದ್ದ ಚೆನ್ನಯ್ಯನನ್ನು ಸೇರಿಸಿ, ಆರಾಧಿಸಿ ಅವರು ತಮ್ಮ ಮೂಲ ಕುಲದ ಸೂತಕವನ್ನು ಕಳೆದುಕೊಳ್ಳುತ್ತಾರೆ. ಚೆನ್ನಯ್ಯನ ಮನೆಯ ದಾಸಿಯ ಮಗನಿಗೆ ಕಕ್ಕಯ್ಯನ ಮನೆಯ ದಾಸಿಯ ಮಗಳ ಹೊಟ್ಟೆಯಲ್ಲಿ ತಾನು ಹುಟ್ಟಿದವನೆಂದು ಹೇಳಿಕೊಳ್ಳುವ ಕೆಚ್ಚು ಬಸವಣ್ಣನವರಿಗಲ್ಲದೆ ಮತ್ತಾರಿಗುಂಟು? 'ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯ', 'ಚೆನ್ನಯ್ಯನೆಮ್ಮಯ್ಯನು, ಚೆನ್ನಯ್ಯನ ಮಗ ನಾನು', 'ಮಾದಾರನಮಗ ನಾನಯ್ಯ' ಎಂದು ತಮ್ಮ ಅಹಂಕಾರ ಭಂಜನೆಗಾಗಿ ಮೇಲಿಂದ ಮೇಲೆ ಸ್ಮರಿಸಿಕೊಳ್ಳುತ್ತಾರೆ. ಚೆನ್ನಯ್ಯನ ಹೆಸರಂತೂ ಜಾಗೃತವಾಗಿದ್ದಾಗಲೆಲ್ಲ ಅವರ ನಾಲಿಗೆಯ ಮೇಲೆ ನರ್ತಿಸುತ್ತದೆ. ಅವರ ಮನಸ್ಸಿನಲ್ಲಿ ಪ್ರತಿಧ್ವನಿಗೈಯುತ್ತದೆ. ಅವನನ್ನು ನೆನೆನೆನೆದು ಅವರ ಮನ ದಣಿಯದು. ಹಾಡಿ ಹಾಡಿ ಅವರ ನಾಲಿಗೆ ದಣಿಯದು.

ಜನ್ಮ ಜಾತಿ ನೆನಪಿಗೆ ಬಂದಾಗ ಅವರು ಭೂಮಿಗೆ ಕುಸಿದು ಹೋಗುತ್ತಾರೆ; ಚೆನ್ನಯ್ಯನ ವಂಶದವರೆಂದು ಹೇಳಿಕೊಳ್ಳುವಾಗ, ಅವನನ್ನು ಮುತ್ತಯ್ಯನೆಂದು ಸಂಬೋಧಿಸುವಾಗ ಅವರ ಹೆಮ್ಮೆಯ ಕೋಡು ಗಗನವನ್ನು ತಿವಿದಂತಾಗುತ್ತದೆ. ನಿರ್ಜಾತೀಯ ಸಮಾಜ ಸ್ಥಾಪನೆಯೇ ತಮ್ಮ ಜೀವನ ಧ್ಯೇಯವೆಂದು ಬಡಾಯಿ ಕೊಚ್ಚಿಕೊಳ್ಳುವ ಆಧುನಿಕ ನಾಯಕರು ಎಂದಾದರೊಮ್ಮೆ ಬಸವಣ್ಣನವರಂತೆ ಹಲುಬಿದ್ದರೆ, ಬಸವಣ್ಣನವರು ಚೆನ್ನಯ್ಯ, ಕಕ್ಕಯ್ಯ, ಚಿಕ್ಕಯ್ಯರನ್ನಪ್ಪಿಕೊಂಡಂತೆ ಅವರು ಇಂದಿನ ದಲಿತ ಬಂಧುಗಳನ್ನು ಅಪ್ಪಿಕೊಂಡಿದ್ದರೆ, ಸ್ವಾತಂತ್ರ್ಯ ಬಂದ ಮೂವತ್ತೆರಡು ವರ್ಷಗಳ ನಂತರವೂ ಅಸ್ಪೃಶ್ಯತೆ ಎಂದಿನಂತೆ ಮುಂದುವರಿಯಬೇಕಾಗಿರಲಿಲ್ಲ. ಅಸ್ಪೃಶ್ಯತೆ ನ್ಯಾಯಬಾಹಿರವೆಂದು ರಾಜ್ಯಾಂಗದಲ್ಲಿ ಅಚ್ಚುಗೊಂಡಿದ್ದರೆ ಸಾಲದು, ಅದು ಸವರ್ಣೀಯರ ಮನಸ್ಸಿನಲ್ಲಿ ಮುದ್ರೆಗೊಂಡಾಗಲೇ ಹರಿಯುವಂಥದೆಂಬ ಪಾಠವನ್ನು ಬಸವಣ್ಣನವರಿಂದ ಕಲಿಯಬೇಕಾಗಿದೆ. ದಲಿತರಿಗೆ ಸಚಿವ ಮಂಡಲಿಯಲ್ಲೊಂದು ಜಾಗ ತೋರಿಸಿದರೆ ಸಾಲದು, ಹೃನ್ಮಂದಿರದಲ್ಲಿ ಸ್ಥಾನ ದೊರೆತದ್ದಾದರೆ, ಅವರಿಗಿರಲಿ, ಸವರ್ಣೀಯರಿಗೂ ಶ್ರೇಯಸ್ಸು ಪ್ರಾಪ್ತವಾಗುತ್ತದೆಂಬುದನ್ನು ಮರೆಯಲಾಗದು.

ಜಾತೀಯತೆಯ ತಾಯಿಬೇರು ಹಿಂದೂಮತದ ಗರ್ಭದಲ್ಲಿ ಚಾಚಿಕೊಂಡಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಶತಶತ ವರ್ಷಗಳಿಂದ ತಾರತಮ್ಯವನ್ನುಳಿಸಿಕೊಂಡು ಪ್ರತ್ಯೇಕತೆಯನ್ನು ಮುಂದುವರಿಸಿಕೊಂಡು ಬಂದಿರುವ ಜಾತಿಗಳನ್ನೊಂದುಗೂಡಿಸುವುದು ಸುಲಭವೇನಲ್ಲ. ಸಹಭೋಜನ ಅಂತರ್ಜಾತೀಯ ವಿವಾಹಗಳ ಮೂಲಕ ಒಂದುಗೂಡಿಕೆ ಸಾಧ್ಯವಾದೀತೆಂದು ಬಸವಣ್ಣನವರೇ ಬಗೆದಿದ್ದದ್ದುಂಟು. ಪೂರ್ವಭಾವಿಯಾಗಿ ಜನ ಮನೋವೇದಿಕೆಯ ಸಿದ್ಧತೆಗೆ ಆದ್ಯತೆ ನೀಡಬೇಕೆಂಬ ಸಂಗತಿ ಆ

* The more I study the Hindu scriptures and the more I discuss them with Brahmins, the more I feel convinced that untouch ability is the greatest blore upon Hinduism. We shall dig our own grave if we do not purge ourselves of this curse of untouch ability.
The purification required is not of untouchables, but of the so called superior castes.







ಮನೋವೈದ್ಯರಿಗೆ ಬಹುಬೇಗನೆ ಹೊಳೆಯುತ್ತದಷ್ಟೆ, ಸಿದ್ಧತೆಯ, ವಿಧಾನವೂ ಅವರ ಬಗೆಗಣ್ಣಿಗೆ ಕಾಣಿಸುತ್ತದೆ. ಎಲ್ಲರ ಜನರ ಧ್ಯೇಯೋದ್ದೇಶಗಳು ಏಕೀಭವಿಸಿದಾಗ ಮಾತ್ರ, ಭಾವೈಕ್ಯ ಸಾಧ್ಯವಾಗುತ್ತದೆ. ಭರತಖಂಡದ ಅಂದಿನ ಪರಿಸ್ಥಿತಿಯಲ್ಲಿ ಏಕದೇವೋಪಾಸನೆ ಮತ್ತು ಧಾರ್ಮಿಕ ಮನೋಭಾವನೆಗಳ ಪ್ರಸರಣದಿಂದ ಮಾತ್ರ ಬೆಳಕು ಬೆಳಕು ಬೆರೆಯುವಂತೆ, ನೀರು ನೀರು ಕೂಡುವಂತೆ, ಮನ ಮನಗಳು ಒಂದಾಗುತ್ತವೆಂದು ಅವರು ಎಣಿಸುತ್ತಾರೆ. ಮನ ಮನಗಳು ಒಂದಾದ ಬಳಿಕ ಯಾವ ವಿಧವಾದ ಭೇದವೂ ಉಳಿಯುವಂತಿಲ್ಲ; ಅನಂತರ ಸಮಾಜದಲ್ಲಿ ಸಮಾನತೆ ಐಕ್ಯತೆಗಳು ಸಮನಿಸುತ್ತವೆ; ಆ ಪರಿಣಾಮವಾಗಿ ರಾಜಕೀಯ ಶಾಂತಿ ಆರ್ಥಿಕ ಕ್ಷೇಮಗಳು ತಾವಾಗಿಯೇ ಭದ್ರವಾಗಿ ನೆಲೆಗೊಳ್ಳುತ್ತವೆ. ಇದರಿಂದಾಗಿ ಸಕಲ ಜೀವಗಳಿಗೆ ಲೇಸುಂಟಾಗುತ್ತದೆ. ಇದು ಬಸವಣ್ಣನವರ ಸರ್ವೋದಯದ ಕಲ್ಪನೆ.

ದರ್ಭೆಯನ್ನು ಹುಲ್ಲೆಂದು, ಜನಿವಾರವನ್ನು ನೇಣೆಂದು ತಿರಸ್ಕರಿಸಿದವರು ಲಿಂಗಧಾರಣೆಗೆ ಪ್ರಾಶಸ್ತ್ಯ ನೀಡಬೇಕಾದರೆ ವಿಶೇಷ ಕಾರಣಗಳಿದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಅದು ಮಹಾಬೆಳಗಿನ ಪ್ರತೀಕವೋ ಸಂಕೇತವೋ ಆಗಿರುವುದಂತು ಭಕ್ತರ ಮಾತು. ಸಮಾನತೆ ಭ್ರಾತೃತ್ವಗಳ ಪ್ರತ್ಯಕ್ಷೀಕರಣಕ್ಕೆ, ಭಾವೈಕ್ಯದ ಕೃತಾರ್ಥತೆಗೆ ಹಾಗೂ ಸಾಮಾಜಿಕ ಸುಭದ್ರತೆಗೆಂದು ಲಿಂಗದೀಕ್ಷೆ ಅನಿವಾರ್ಯವಾಯಿತೆಂದು ತೋರುತ್ತದೆ. ಲಿಂಗದ ಹೆಸರಿನಲ್ಲಿ ಮಾಡುವ ಕೆಲಸವೆಲ್ಲ ಕಾಯಕವಾಗುತ್ತದೆಂದು ಅಂದಾಗ ವೃತ್ತಿ ಸಮಾನತೆ ಸಿದ್ಧಿಸಿದಂತಾಗುತ್ತದೆ. 'ಆವ ಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು?' ಎನ್ನುವಾಗ ಭೇದಗೀದಗಳೆಲ್ಲ ಸಂಪೂರ್ಣವಾಗಿ ಲಯವಾಗುತ್ತವೆ. 'ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ?' 'ಲಿಂಗವಿದ್ದವನೇ ವಾರಣಾಸಿ', 'ಲಿಂಗವಿದ್ದವರ ಮನೆ ಕೈಲಾಸ', ದೀನ ದಲಿತರಲ್ಲಿ ಆತ್ಮಸ್ಥೈರ್ಯವನ್ನು ಕುದುರಿಸಲಿಕ್ಕೆ, ಅವರ ಕೀಳರಿಮೆಯನ್ನು ನೀಗಲಿಕ್ಕೆ, ಅವರ ಮನಃಪರಿವರ್ತನೆಗೆ ಈ ಮಾತುಗಳು ಉದ್ದೀಪನಕಾರಿಯಾಗುತ್ತವೆ. ಅಸ್ಪೃಶ್ಯತೆಯ ನಿರ್ಮೂಲನಕ್ಕೆ ಜಾತಿ ವಿನಾಶಕ್ಕೆ ಬಸವಣ್ಣನವರು ಹರಡಿದ ಲಿಂಗತತ್ತ್ವ ಅಸಾಧಾರಣವಾದುದೆಂದೇ ಹೇಳಬೇಕು. ಲಿಂಗತತ್ತ್ವದಿಂದ ಜಾತಿಸೂತಕ ಅಸ್ಪೃಶ್ಯತೆಯ ಸೂತಕ ಮೊದಲು ಗೊಂಡು ಸರ್ವ ಸೂತಕಗಳು ಹರಿಯುವುದೆಂಬುದು ಅವರ ಬೋಧೆಯ ತಿರುಳು.

'ಹೊಲೆಯ ಮಾದಿಗ ಭಕ್ತನಾದರೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡೆನೆ?' 'ಮಾದರ ಶಿವಭಕ್ತನಾದರೆ ಆತನ ಹೊರೆಯಲಿ ಭೃತ್ಯನಾಗಿರ್ಪುದು ಕರಲೇಸಯ್ಯ', 'ಹೊಲೆಯ ಹೊಲಬಿಗನಾದರೆ ಅವನ ಹೊರೆಯಲ್ಲಿಪ್ಪುದು ಹೊರಹೊಮ್ಮಿದಂಥವು; ಅವರ ಬದುಕಿನ ಭಾಗವಾದಂಥವು. ಮುಟ್ಟುಬಾರದವರಿಗೆ ಅವರು ಕೊಟ್ಟಂಥ ಗೌರವವನ್ನು ಅಸ್ಪೃಶ್ಯತೆ ಮೊಗದೋರಿದಾಗಿನಿಂದ ಈ ತನಕ ಯಾರೂ ನೀಡಿದ್ದಿಲ್ಲ; ಅವರು ಅವರೊಡನೆ ಬಾಳಿದಂತೆ ಈ ನಾಡಿನಲ್ಲಿ ಯಾರೂ ಬಾಳಿಲ್ಲ. ಅವರಂಥವರು ಶತಮಾನಕ್ಕೊಬ್ಬ ಜನಿಸಿದ್ದರೂ ಅದು ಈ ನಾಡಿನಲ್ಲಿ ಎಂದೋ ಸತ್ತು ಹೋಗುತ್ತಿತ್ತು. ಅದಕ್ಕೆ ನಾಚಿಕೆಯಿಂದ ತಲೆಬಾಗ ಬೇಕಾದವರು ಅಸ್ಪೃಶ್ಯರಲ್ಲ, ಸ್ಪೃಶ್ಯರೆನಿಸಿಕೊಂಡವರು. ಅದು ನಿರ್ಮೂಲನವಾದಾಗ ಒದಗಬಹುದಾದ ಯಶಸ್ಸಿಗೂ ಅವರೇ ಭಾಜನರಾಗುತ್ತಾರೆ. 'ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ' ಎಂಬ ಡೋಹರ ಕಕ್ಕಯ್ಯನ ಮಾತಿನಿಂದ ಅಂದು ಬಸವಣ್ಣನವರು ಎಸಗಿದ ಪುಣ್ಯ ಕಾರ್ಯದ ಮಹತ್ತು ವೇದ್ಯವಾಗುತ್ತದೆ.

ಬಸವಣ್ಣನವರ ಅಸ್ಪೃಶ್ಯೋದ್ಧಾರದ ಕಾತರತೆ ಸಾಂಕ್ರಾಮಿಕವಾಗಿ ಸಮಕಾಲೀನ ಶಿವಶರಣರ ಬದುಕನ್ನೆಲ್ಲ ಆಕ್ರಮಿಸಿಕೊಳ್ಳುತ್ತದೆ. ಲಿಂಗದೀಕ್ಷೆಯು ಮೂಲಕ ಕುಲಹೀನರನ್ನು ಕುಲಜರನ್ನಾಗಿ ಮಾರ್ಪಡಿಸುತ್ತಾರೆ. 'ಚಾಂಡಾಲನಾದರೆಯು ಶಿವಭಕ್ತನೇ ಕುಲಜನು' ಎಂದು ಚೆನ್ನಬಸವಣ್ಣ ತಿಳಿಸುತ್ತಾರೆ. 'ತಂದೆಗೆ ಬೈದವನೇ ಹೊಲೆಯು, ತಾಯಿಗೆ ಬೈದವನೆ ಹೊಲೆಯು, ನಿಜವಿಲ್ಲದವನೇ ಹೊಲೆಯ. ಚಿತ್ತದಲ್ಲಿ ಪರಸತಿಯ ಬಯಸಿದಾತನೇ ಹೊಲೆಯ. ಧರ್ಮವ ಮಾಡದವನೇ ಹೊಲೆಯು..... ಇಂತಪ್ಪ ಹೊಲೆಯುರು ಊರ ತುಂಬವಿರಲಾಗಿ ಹೊರಕೇರಿಯವರಿಗೆ ಹೊಲೆಯರೆನ್ನ ಬಹುದೇ?' ಎಂದು ಅಂಬಿಗರ ಚೌಡಯ್ಯ ನಿಜ ಸಾರುತ್ತಾನೆ. ಕಕ್ಕಯ್ಯ ಚೆನ್ನಯ್ಯನನ್ನು ಆಗಾಗ್ಗೆ ನೆನೆಸಿಕೊಂಡು ಆತ್ಮಜ್ಯೋತಿಯನ್ನು ಉಜ್ವಲಗೊಳಿಸಿಕೊಳ್ಳುತ್ತಾನೆ. 'ಕುಲದಲ್ಲಿ ಶೂದ್ರನಾದರೇನು? ಮನದಲ್ಲಿ ಮಹಾದೇವ ನೆಲೆಗೊಂಡವನೆ ಲಿಂಗಾಯತ ನೋಡಾ' ಎಂದು ಸಿದ್ಧರಾಮ ಹೇಳುವಲ್ಲಿ ಹುಟ್ಟಿನಿಂದ ಯಾರಾರೂ







ಲಿಂಗಾಯತರಾಗಲಾರರೆಂದೂ ಸದಾ ಸದಾಶಿವನ ಚಿಂತೆಯಲ್ಲಿದ್ದವನೇ ಲಿಂಗಾಯತನೆಂದೂ, ಶೂದ್ರನಾಗಲಿ, ಅಂತ್ಯಜನಾಗಲಿ ಸಾಧನೆಯಿಂದ ಮೇಲೇರಬಹುದೆಂದೂ ಸ್ಪಷ್ಟಪಡಿಸುತ್ತಾನೆ.

**ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೋ**
**ಕುಲವೇ ಡೋಹರನ? ಕುಲವೇ ಮಾದಾರನ? ಕುಲವೇ**
**ದೂರ್ವಾಸನ?**
**ಕುಲವೇ ವ್ಯಾಸನ? ಕುಲವೇ ವಾಲ್ಮೀಕನ? ಕುಲವೇ**
**ಕೌಂಡಿಲ್ಯನ?**
**ಕುಲವ ನೋಳ್ಪಡೆ ಹುರುಳಿಲ್ಲ;**
**ಅವರ ನಡೆ ನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ,**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕುಲಗಳು ಅಸಂಖ್ಯವಾಗಿರುವಾಗ ಯಾವುದೋ ಒಂದು ಕುಲದಲ್ಲಿ ಜನಿಸಬೇಕಾದ್ದು ಅನಿವಾರ್ಯ, ಆಕಸ್ಮಿಕ. ಹುಟ್ಟಿದ ನಂತರ ನಾನಾ ಸಾಧನೆಗಳ ಮೂಲಕ ದೇಶ ಕಾಲ ಸ್ಪರ್ಧಿಗಳಾಗಿ ಬೆಳೆದಿರುವ ವ್ಯಾಸ ವಾಲ್ಮೀಕಿಯರ ಕುಲವನ್ನು ವಿಚಾರಿಸುವುದು ಗಾಂಪತನವಾಗುತ್ತದೆ. ಚೆನ್ನಯ್ಯ, ಕಕ್ಕಯ್ಯ ವಿಚಾರವೂ ಅಷ್ಟೇ. ಶಾಲೆಯ ದಾಖಲೆಗಳಲ್ಲಿ, ಕಚೇರಿಯ ಕಡತಗಳಲ್ಲಿ, ಹುದ್ದೆಗಾಗಿ ಸಲ್ಲಿಸುವ ಅರ್ಜಿಗಳಲ್ಲಿ, ಅಂಗಾಂಗಗಳ ಮೇಲೆಲ್ಲ ಕುಲವನ್ನು ಪ್ರದರ್ಶಿಸಿಕೊಳ್ಳುವ ಈಗಿನ ಕಾಲದ ನಾಯಕ ಶಿರೋಮಣಿಗಳನ್ನು ಕುರಿತು ವಿಡಂಬಿಸಿದಂತಿದೆ, ಸಿದ್ಧರಾಮನ ಈ ವಚನ.

ಬಸವಣ್ಣನವರು ತೋರಿದ ಮಾರ್ಗದಲ್ಲಿ ನಡೆಯದ ಜನ ಅವರ ಅನುಯಾಯಿ ವರ್ಗದಲ್ಲಿಯೇ ಹಲವರಿದ್ದಿರಬೇಕು. ಹೊಸದಾಗಿ ದೀಕ್ಷೆ ಪಡೆದವರನ್ನು ಹಳಬರು ಹಂಗಿಸುತ್ತಿದ್ದಿರಬೇಕು. ಮುಟ್ಟಬಾರದವರೋ, ಕ್ಷುದ್ರವೃತ್ತಿಯಿಂದ ಜೀವನ ಮಾಡುತ್ತಿದ್ದವರೋ, ಕನಿಷ್ಠಕುಲದವರೋ ಸನಿಹಕ್ಕೆ ಬಂದಾಗ ಭಕ್ತರು ಕಡೆಗಣ್ಣಿಂದ ನೋಡಿರಬೇಕು; ಅವರ ಬಗ್ಗೆ ಕಟಕಿಯಾಡಿರಬೇಕು. ಆಗ ಬಸವಣ್ಣನವರು 'ಲಿಂಗದೇವನ ಪೂಜಿಸಿ ಕುಲವನರಸುವರೆ, ಅಯ್ಯ' ಎಂದು ನೊಂದು ನುಡಿದಿರಬೇಕು. 'ಭಕ್ತರ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ' ಎಂದು ಪ್ರತಿಜ್ಞೆಗೈದಿರಬೇಕು. ತಮ್ಮವರ ತಪ್ಪಿಗಾಗಿ ಅವರು ಎಂಥ ಶಿಕ್ಷೆಗಾದರೂ ಸಿದ್ಧರಾಗಿರಬೇಕು. ಸಂದರ್ಭವೊದಾಗಿದಾಗಲೆಲ್ಲ ಪರಿಪರಿಯಾಗಿ ಅವರು ತಮ್ಮವರಿಗೆ ಬುದ್ಧಿವಾದ ಹೇಳಿರಬೇಕು.

**ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ**
**ಜಲವೊಂದೆ ಶೌಚಾಚಮನಕ್ಕೆ**
**ಕುಲವೊಂದೆ ತನ್ನ ತಾನರಿದವರಿಗೆ**

ಈ ಭಾವನೆಯನ್ನು ಇಷ್ಟು ಸುಂದರವಾಗಿ, ಮೂರ್ತಿವತ್ತಾಗಿ ಹೇಳಿದವರು ವಿರಳ. ಇದು ಬರಿಯ ಭಾವನೆಯಲ್ಲ, ಅವರ ಬದುಕಿನ ಅನುಭವ. ಈ ವಿಷಯದಲ್ಲಿ ಅವರ ಕಾತರತೆ, ಉದ್ವಿಗ್ನತೆ, ತುಡಿತ, ಸಂಕಟ ಎಷ್ಟು ತೀವ್ರವಾಗಿವೆಯೆಂದರೆ, ಎಷ್ಟು ಸಾರಿ ಎಷ್ಟು ವಿಧವಾಗಿ ಹೇಳಿದರೂ ಸಮಾಧಾನವಿಲ್ಲ, ತೃಪ್ತಿಯಿಲ್ಲ; 'ವಿಪ್ರ ಮೊದಲು, ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ' ಎಂದು ಕುಲದ ತಾರತಮ್ಯವನ್ನು ಪ್ರದರ್ಶಿಸಿದ ಶ್ರೇಷ್ಠಕುಲದವರ ಮುಂದೆ ಅವರು ಈ ಮಾತು ಆಡಿರಬೇಕು.

ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಬಸವಣ್ಣನವರು ತೋರಿಸಿದ ಪ್ರಾಮಾಣಿಕತೆಯನ್ನು, ಅವರು ಕೈಕೊಂಡ ಕಾರ್ಯಕ್ರಮಗಳನ್ನು ಅವರಿಗೆ ಹಿಂದೆಯಾಗಲೀ, ಈಚೆಯಾಗಲೀ ಯಾರೂ ತೋರಿಸಿದ್ದಿಲ್ಲ. ಕೈಕೊಂಡಿದ್ದಿಲ್ಲ, ಸ್ವಲ್ಪಮಟ್ಟಿಗೆ ಅವರ ನೆನಪನ್ನು ತಂದುಕೊಡುವವರು ಗಾಂಧೀಜಿ ಮಾತ್ರ, ಇವರನ್ನನುಕರಿಸಿ ಕೆಲವು ಸ್ವಾಮಿಗಳು ಮುಟ್ಟಬಾರದವರ ಕೇರಿಗೆ ಹೋಗಿ ಬರುವುದುಂಟು. ಪ್ರಾಯಶಃ ಪತ್ರಿಕೆಗಳಲ್ಲಿ ಸುದ್ದಿಬರಲೆಂಬ ದೃಷ್ಟಿಯಿಂದ, ಬಸವೇಶ್ವರರು ಬರಿದೆ ಹೋಗುವಂಥವರಲ್ಲ; ಅವರ ಮನೆಯಲ್ಲಿ ಪ್ರಸಾದ ವುಂಡುಬರುತ್ತಾರೆ. ಮುಟ್ಟಬಹುದಾದಂಥವರೋ ದೊರೆಗಳೋ ಅವರ ವರ್ತನೆಯನ್ನು ಪ್ರಶ್ನಿಸಿದಾಗ ಮುಲಾಜಿಲ್ಲದೆ ಉತ್ತರವೆಸೆಯುತ್ತಾರೆ. ಅಂಥ ಎಸಕ ಗಾಂಧೀಜಿಯಿಂದಲೂ ಸಾಧ್ಯವಾಗಿಲ್ಲ. 'ಬಂದು ಬಲ್ಲಹ ಬಿಡಲು ಹೊಲಗೇರಿಯೆಂಬ ಹೆಸರೊಳವೆ, ಅಯ್ಯಾ?' ಎಂದು ಶಿವನಾಗಿಮಯ್ಯ ಬಸವಣ್ಣನವರು ತಮ್ಮ ಮನೆಗೆ ಬಂದು ಹೋದನಂತರ ನುಡಿದ ಮಾತು ಈ ಶತಮಾನದವರಿಗೆ ನೀಡಿದ ಸಂದೇಶದಂತಿದೆ. ಅಸ್ಪೃಶ್ಯತೆಯನ್ನು ಹೋಗಲಾಡಿಸಬೇಕೆನ್ನುವವರು ಮಾಡಬೇಕಾದ ಕೆಲಸವಿದು. ಅಸ್ಪೃಶ್ಯತೆ ಅಪರಾಧವೆಂಬ ರಾಜ್ಯಾಂಗದ ಘೋಷಣೆ ನಿರರ್ಥಕವೆಂಬ ಸಂಗತಿ ಈಗಂತು ಸರ್ವರಿಗೂ ವೇದ್ಯವಾಗಿದೆ.

ಉತ್ತಮರಾಗಲೀ, ಕನಿಷ್ಠರಾಗಲೀ, ಶೂದ್ರರಾಗಲೀ, ಎಲ್ಲರೂ ಹುಟ್ಟು ಸಾವುಗಳಲ್ಲಿ ಒಂದೆ. ಮಕ್ಕಳು ಸಣ್ಣವರಿದ್ದಾಗ ಜಾತಿಪ್ರಜ್ಞೆಯೇ ಇಲ್ಲ. ಯಾರ ಬಾಯಿಯ ಎಂಜಲಾದರೂ







ಸರಿಯೆ ಭೇದವೆಣಿಸುವುದಿಲ್ಲ, ಬೆಳೆಯುತ್ತ ಬೆಳೆಯುತ್ತ ದೊಡ್ಡವರ ಸಣ್ಣತನ ಅವರಿಗೂ ಆವರಿಸುತ್ತದೆ. ಪರಿಸರ ಒತ್ತಡದಿಂದ ಜಾತೀಯತೆ ರಂಗು ಕಟ್ಟಿಕೊಳ್ಳುವುದೆನ್ನುವುದಾದರೆ ಅದೊಂದು ಅಸಹಜ ವ್ಯವಸ್ಥೆ, ಧರ್ಮ ವಿರುದ್ಧವಾದ ಭಾವನೆಯೆಂದೇ ಹೇಳಬೇಕಾಗುತ್ತದೆ. ಮಾನವನಿಂದ ಮಾನವನನ್ನು ಬೇರ್ಪಡಿಸುವ, ಮಾನವೀಯ ಗುಣಮೌಲ್ಯಗಳನ್ನು ಮರೆಯಿಸುವ, ಅಹಂಕಾರವನ್ನು ಪೋಷಿಸುವ, ಶೋಷಣೆಗೆ ನೆರವಾಗುವ, ಸಮಾಜದ ಭದ್ರತೆಗೆ ಅಪಾಯಕಾರಿಯಾಗುವ, ರಾಷ್ಟ್ರೈಕ್ಯಕ್ಕೆ ಮಾರಕವಾಗುವ ಜಾತೀಯತೆಯನ್ನು ಮೂಲೋತ್ಪಾಟನ ಮಾಡಲು, ಜಾತೀಯತೆಗಿಂತಲೂ ಕ್ರೂರತಮವಾದ ಅಸ್ಪೃಶ್ಯತೆಯನ್ನು ಹೆಸರಿಲ್ಲದಂತೆ ತೊಡೆಯಲು ಪ್ರಯತ್ನಿಸಿದವರಲ್ಲಿ ಬಸವಣ್ಣನವರೇ ಮೊದಲಿಗರು; ಸದ್ಯಕ್ಕಂತೂ ಅವರೇ ಕೊನೆಯವರು. ಅಜ್ಞಾನ ದಾರಿದ್ರ್ಯಗಳಿಗೆ ಜಾತೀಯತೆಯೊಂದೇ ಪ್ರಬಲ ಕಾರಣವೆಂದೂ, ಮಾನವನ ಅಧ್ಯಾತ್ಮ ಸಾಧನೆಗೂ ಅವು ಪ್ರತಿಬಂಧಕವಾಗುತ್ತವೆಂದು ಅವರು ಸ್ಪಷ್ಟಪಡಿಸುತ್ತಾರೆ. ಜಾತೀಯತೆ ನಿರ್ಮೂಲವಾಗುವ ತನಕ ಸಮಾನತೆ ಸಮನಿಸುವುದಿಲ್ಲ; ಅಸ್ಪೃಶ್ಯತೆ ತೊಲಗುವ ತನಕ ಸ್ವಾತಂತ್ರ್ಯ ಲಭಿಸುವುದಿಲ್ಲ. ಸರ್ವರಿಗೂ ಸಮಾನಾವಕಾಶ ಸ್ವಾತಂತ್ರ್ಯಗಳು ಲಭಿಸಿದಾಗ ಮಾತ್ರ ನಿಮ್ನವರ್ಗದ ಸಮಾಜದಲ್ಲಿ ಸುಪ್ತವಾಗಿರುವ ಪ್ರತಿಭೆ ಜಾಗೃತಗೊಳ್ಳುವಂತಾಗುತ್ತದೆ; ಸಿ.ವಿ. ರಾಮನ್, ರವೀಂದ್ರನಾಥ ಟಾಗೂರರಂಥ ಪ್ರತಿಭಾವಂತರು ಬಹುಸಂಖ್ಯೆಯಲ್ಲಿ ಅವತರಿಸಲನುಕೂಲವಾಗುತ್ತದೆ.

ಧರ್ಮ ಖಿಲವಾದಾಗ, ಅದರ ಪುನರುತ್ಥಾನಕ್ಕಾಗಿ, ಐತಿಹಾಸಿಕ ಅವಶ್ಯಕತೆಯೆನ್ನುವಂತೆ ಮಹಾಪುರುಷರು ಜನಿಸುತ್ತಾರೆಂಬ ಮಾತು ಸುಳ್ಳಲ್ಲ. ಹನ್ನೆರಡನೆಯ ಶತಮಾನದ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ಪರಿಸ್ಥಿತಿ ಅತ್ಯಂತ ಶೋಚನೀಯಾವಸ್ಥೆಯಲ್ಲಿದ್ದಾಗ ಬಸವಣ್ಣನವರು ಧರೆಗಿಳಿದು ಬರುತ್ತಾರೆ. ಅವರು ಪರಿಸ್ಥಿತಿ ಪರಿಸರಗಳ ಕೂಸಾದರೂ ಅವನ್ನು ಮೀರಿ ಗಗನದೆತ್ತರಕ್ಕೆ ಬೆಳೆದು ನಿಲ್ಲುತ್ತಾರೆ. ಅವರಿಗೆ ನೆರವಾಗಲೆಂಬಂತೆ, ಉದ್ದೇಶಪೂರ್ವಕವಾಗಿ ಪೂರ್ವರಂಗ ಮೊದಲೇ ಸಿದ್ಧವಾಗಿತ್ತೆಂಬಂತೆ ಪ್ರಭುದೇವ, ಚೆನ್ನಬಸವಣ್ಣ, ಸಿದ್ಧರಾಮ, ಮಹದೇವಿಯಕ್ಕ, ಮಡಿವಾಳ ಮಾಚಯ್ಯ, ಕಕ್ಕಯ್ಯ, ಶ್ವಪಚಯ್ಯ, ಹರಳಯ್ಯ ಮೊದಲಾದವರು ಜನಿಸಿ, ಅಧೋಗಾಮಿಯಾಗಿದ್ದ ಸಮಾಜವನ್ನು ಮೇಲೆತ್ತಲು ಪ್ರಯತ್ನಿಸುತ್ತಾರೆ. ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಸಾಮಾನ್ಯ ಜನತೆಗೆ ಅವರ ಕ್ರಾಂತಿಯ ಸಂದೇಶ ಅರ್ಥವಾಗದೆ, ಕ್ರಾಂತಿ ಅಯಶಸ್ವಿಯಾಗುತ್ತದೆ. ತಾವು ಹುಟ್ಟಿದ, ಬೆಳೆದ, ಪೋಷಿಸಿದ, ಅನೇಕ ಆಸೆಗಳನ್ನು ಹುಟ್ಟಿಸಿದ ಸಮಾಜದಲ್ಲಿಯೇ ಜಾತೀಯತೆಯನ್ನು ತೊಡೆಯಲು ಕಷ್ಟವೆಂದು ತೋರಿದಾಗ ಅವರು ಇಹಲೋಕವನ್ನು ತ್ಯಜಿಸುತ್ತಾರೆ. ಅವರು ತ್ಯಜಿಸಿದ್ದು ದೇಹವೇ ಹೊರತು ಆತ್ಮಜ್ಯೋತಿಯಲ್ಲ. ಅವರ ಆತ್ಮಜ್ಯೋತಿ ನಂದದೆ, ಮಂಕಾಗದೆ ಎಂದಿನಂತೆ ಅವರ ವಚನಗಳ ಮೂಲಕ ರಾರಾಜಿಸುತ್ತಿದೆ. ದೇಹಕ್ಕೆ ಸಾವುಂಟು, ಉಸಿರಿಗೆ ಸಾವಿಲ್ಲ. ವಚನಗಳೇ ಅವರ ಉಸಿರು. ಸಹ್ಯಾದ್ರಿ, ಕಾವೇರಿ, ತುಂಗಭದ್ರಾ ಮೊದಲಾದ ನಿಸರ್ಗ ವಿಭೂತಿಗಳನ್ನು ಪಡೆದ ನಾವು ಪುಣ್ಯಶಾಲಿಗಳು. ಅವುಗಳಿಗಿಂತ ಮಿಗಿಲಾಗಿ ವಚನ ಸಂಪತ್ತಿಗೆ ಉತ್ತರಾಧಿಕಾರಿಗಳಾಗಿರುವ ಕನ್ನಡಿಗರು ಧನ್ಯರು. ಕರ್ನಾಟಕದಲ್ಲಲ್ಲದೆ ತಮಿಳುನಾಡಿನಲ್ಲಿಯೋ ಬಂಗಾಳದಲ್ಲಿಯೋ ಇಲ್ಲವೇ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೋ ಬಸವಣ್ಣನವರು ಹುಟ್ಟಬೇಕಾಗಿತ್ತು. ಹುಟ್ಟಿದ್ದರೆ ಅವರಿಗೂ, ಅವರ ವಚನಗಳಿಗೂ ಅವರು ಹುಟ್ಟಿದ ನೆಲಕ್ಕೂ, ಅವರ ಉಸಿರಾದ ಕನ್ನಡ ನುಡಿಗೂ ವಿಶ್ವಮಾನತೆ ದೊರಕುತ್ತಿತ್ತು.

ಅದೆಲ್ಲ ಕನಸು! ಬರಿಯ ಹಗಲುಗನಸು! ಅವರು ಹುಟ್ಟಿದ ನೆಲದಲ್ಲಿಯೇ ಅಸ್ಪೃಶ್ಯತೆ, ಜಾತೀಯತೆಗಳು ಮಣ್ಣುಗೂಡಲಿಲ್ಲವೆಂಬುದನ್ನು ನೆನೆದಾಗ, ಎಂಟು ನೂರು ವರ್ಷಗಳ ನಂತರವಾದರೂ ಅವರನ್ನು ನಾವು ಅರ್ಥ ಮಾಡಿಕೊಂಡಿಲ್ಲ, ಅವರ ವಚನಗಳ ಬಿಸಿಯುಸಿರನ್ನೂ ಮೂಕವೇದನೆಯನ್ನು ಗ್ರಹಿಸಲಾಗಿಲ್ಲ ಎಂದು ಮನಸ್ಸು ವಿಹ್ವಲಗೊಳ್ಳುತ್ತದೆ; ಅಣ್ಣನವರ ಉತ್ತರಾಧಿಕಾರಿಗಳಾಗಲು ಯೋಗ್ಯರೆ ಎಂದು ಯೋಚಿಸುವಂತಾಗುತ್ತದೆ. ಮತ್ತೊಮ್ಮೆ ಆ ಯುಗಶಕ್ತಿ ಕನ್ನಡಿಗರ, ಭಾರತೀಯರ ನಾಡಿನಾಡಿಗಳಲ್ಲಿ ಪ್ರವಹಿಸುವುದಾದರೆ, ವಚನ ಡಿಂಡಿಮ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಪ್ರತಿಧ್ವನಿಗೈಯುವುದಾದರೆ, ಬಸವಣ್ಣನವರು ಮತ್ತೆ ನಮಗೆ ಮಾರ್ಗದರ್ಶಕರಾಗುವುದಾದರೆ ಜಾತೀಯತೆ ಅಸ್ಪೃಶ್ಯತೆಗಳು ನಿರ್ಮೂಲವಾಗಬಹುದೆಂದು ಆಶಿಸಬಹುದಾಗಿದೆ. ಈ ಆಸೆ ಈಡೇರುವ ಕಾಲ ಬಹುಬೇಗ ಬರಲೆಂದು ಆ ಮಹಾ ಪುರುಷನನ್ನೇ ಪ್ರಾರ್ಥಿಸಬೇಕಾಗಿದೆ !







ಚಿಂತನೆ

# ಗುರುವಾಕ್ಯ ಪರಿಪಾಲನೆ

– ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು *

ಭಾರತೀಯ ಪರಂಪರೆಯಲ್ಲಿ ಗುರುವಿಗೆ ಮಹತ್ತರವಾದ ಸ್ಥಾನವನ್ನು ನೀಡಿದ್ದೇವೆ. ಅವನಿಗೆ ಜಾತಿ, ಮತ, ಧರ್ಮಗಳು ಸೋಂಕಿಲ್ಲ. ಅವನು ಬಂಧಮುಕ್ತ. ಸೀಮಿತ ಎಲ್ಲೆಯಂತೂ ಇಲ್ಲವೇ ಇಲ್ಲ. ಅವನು ಜಗದ್ಗುರು. ಅವನ ಗುರಿ ತಾನೇರಿದ ಎತ್ತರಕ್ಕೆ ಎಲ್ಲರನ್ನು ಕೊಂಡೊಯ್ಯುವುದು. ತನಗಿಂತ ಎತ್ತರಕ್ಕೆ ಏರಿದ ಶಿಷ್ಯನ ಶ್ರೇಯಸ್ಸನ್ನು ನೋಡಿ ಸಂತಸ ಪಡುವುದು ಮತ್ತು ಆತನ ಹೃದಯದಲ್ಲಿ ಸತ್ಯದರ್ಶನ ಮಾಡಿಸುವುದು. ಈ ಜಗತ್ತು ಕಂಡ ಶ್ರೇಷ್ಠ ದಾರ್ಶನಿಕರಾದ ರಾಮಕೃಷ್ಣ ಪರಮಹಂಸರ ಶಿಷ್ಯ ನರೇನ್ ಇರಬಹುದು, ಗುರುಗೋವಿಂದಸಿಂಹರ ಶಿಷ್ಯ ಶಿಶುನಾಳ ಷರೀಫರಿರಬಹುದು. ಇವರು ಶಿಷ್ಯರು ಏರಿದ ಎತ್ತರವನ್ನು ನೋಡಿ ಹೃದಯಾರೆ ಹರಸಿ ಸಂತೋಷಿಸಿದವರು. ಅಂತಹ ಸಹಸ್ರಾರು ಮನಸ್ಸುಗಳು ನಮ್ಮ ನಡುವೆ ಆಗಿ ಹೋಗಿವೆ. ಶಿಷ್ಯರುಗಳಂತೂ ಸಾಧನೆಯ ಶಿಖರ ಏರುತ್ತಾ ಏರುತ್ತಾ ಇವೆಲ್ಲವೂ ಗುರು ಕೃಪೆಯಿಂದ ದೊರಕಿದ ಫಲವೆಂದು ಕಿಂಕರ ಭಾವದಿಂದ ಕೃತಜ್ಞರಾಗಿರುವುದನ್ನು ಕಾಣುತ್ತೇವೆ. ದಾಸರಂತೂ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದು ಹೇಳಿದ್ದಾರೆ. ಆದರೆ ಇಂದು ಆತ್ಮಸಂಸ್ಕಾರ ಮಾಡಿಕೊಂಡ ಗುರುವಾಗಲೀ, ಅದಕ್ಕಾಗಿ ಹಾತೊರೆಯುವ ಶಿಷ್ಯರಾಗಲೀ ಕಂಡುಬರುವುದಿಲ್ಲ. ಜಾಗತೀಕರಣದ ಪರಿವರ್ತನೆಯ ಪ್ರಭಾವದಿಂದ ಮನುಷ್ಯನು ಬಾಹ್ಯವಾಗಿ ಸಿರಿವಂತನಾದರೂ ಅವನಿಗೆ ಆಂತರಿಕ ಪಕ್ವತೆ ಇಲ್ಲವಾಗುತ್ತಾ ಹೋಗುತ್ತಿದೆ. "ಫಲಪಕ್ವವಾದಲ್ಲದೇ ಹೊರಗಣ ಸಿಪ್ಪೆ ಒಪ್ಪಗೆಡದು" ಎನ್ನುತ್ತಾರೆ ಶರಣರು.

ಒಮ್ಮೆ ಗುರು ಗೋವಿಂದಸಿಂಹರು ಶಿಷ್ಯರೊಡಗೂಡಿ ಸಂಚಾರ ಮಾಡುತ್ತಿರುವಾಗ ಒಂದು ಘಟನೆ ಸಂಭವಿಸುತ್ತದೆ. ಉತ್ತರ ಕರ್ನಾಟಕದ ಭಾಗ, ಹಳ್ಳಿಹಳ್ಳಿಗಳಲ್ಲಿ ಧರ್ಮಪ್ರಚಾರ ಮಾಡಿಕೊಂಡು ಪ್ರವಾಸ ಮಾಡುತ್ತಿರುತ್ತಾರೆ. ಅಂದಿನ ಕಾಲದಲ್ಲಿ, ಕಾಲ್ನಡಿಗೆಗೆ ಗುರುಗಳ ಹೊರತು ಶಿಷ್ಯರಾರೂ ಪಾದುಕೆ ಧರಿಸುವ ಪರಿಪಾಠವಿರಲಿಲ್ಲ. ಮಾರ್ಗದಲ್ಲಿ ಕಲ್ಲು-ಮುಳ್ಳು, ಬೇಲಿ ಸರ್ವೇ ಸಾಮಾನ್ಯ. ಒಮ್ಮೆ ಒಂದು ಜಾಲಿಮುಳ್ಳಿನ ಬೇಲಿಯನ್ನು ದಾಟುವ ಸನ್ನಿವೇಶ ಎದುರಾಯಿತು. ಗುರು-ಗೋವಿಂದಸಿಂಹರು ಬೇಲಿಯನ್ನು ದಾಟಿ ಶಿಷ್ಯರಿಗೆ ಇದು ಭಾರೀ ಮುಳ್ಳು, ತೆಗೆದುಕೊಳ್ಳಿ, ನನ್ನ ಚಪ್ಪಲಿಯನ್ನು ಮೆಟ್ಟಿ ಒಬ್ಬೊಬ್ಬರಾಗಿ ಬೇಲಿ ದಾಟಿ ಎಂದು ಆದೇಶಿಸುತ್ತಾರೆ. ಆದರೆ ಯಾರೂ ಗುರುಗಳ ಚಪ್ಪಲಿ ತುಳಿದು ಬರಲು ಒಪ್ಪುವುದಿಲ್ಲ. ಷರೀಫ ಮಾತ್ರ ನಿರ್ಲಿಪ್ತನಾಗಿ ಚಪ್ಪಲಿ ಧರಿಸಿ ಬೇಲಿ ದಾಟಿ ಬರುತ್ತಾನೆ. ಬೇರೆ ಮಾರ್ಗಗಳಿಂದ ಬೇಲಿಯನ್ನು ದಾಟಿದ ಉಳಿದ ಶಿಷ್ಯರುಗಳು ತಮ್ಮ ತಮ್ಮಲ್ಲೇ ಷರೀಫನ ಅಹಂಕಾರ, ಧಾರ್ಷ್ಟ್ಯದ ಬಗ್ಗೆ ಮಾತನಾಡುತ್ತಾ "ಅವನು ಗುರುದ್ರೋಹಿ" ಎನ್ನುತ್ತಾ ನಡೆಯುತ್ತಿರುವಾಗ ಗೋವಿಂದಸಿಂಹರು ಹಿಂತಿರುಗಿ ನೋಡಿ "ಷರೀಫ ಬರೀ ನನ್ನ ಚಪ್ಪಲಿಯನ್ನು ಮಾತ್ರ ತುಳಿದ. ಆದರೆ ನೀವು ನನ್ನ ನಾಲಗೆಯನ್ನೇ ತುಳಿದು ಬಿಟ್ಟಿರಿ" ಎನ್ನುತ್ತಾರೆ. ಷರೀಫ ಗುರುವಾಕ್ಯವನ್ನು ಪರಿಪಾಲಿಸಿದ್ದಾನೆ. ನನ್ನ ಮತ್ತು ಅವನ ನಡುವೆ ಯಾವುದೇ ವ್ಯತ್ಯಾಸವಿಲ್ಲ ಅವನು ಏರಿದ ಎತ್ತರಕ್ಕೆ ನೀವೂ ಏರಬೇಕೆಂದು ಸಲಹೆ ನೀಡುತ್ತಾರೆ.

**ಮನದ ಕದವ ತೆರೆದು ಅರಿವು ಕೊಟ್ಟ ಗುರುವು**
**ತಪ್ಪು ನಡೆಯ, ನುಡಿಯು ತವಿದುತೋರಿದ ಚೆಲುವು**

* ಅಧ್ಯಕ್ಷರು, ಶ್ರೀ ಅರಮೇರಿ ಕಳಂಚೇರಿ ಮಠ, ವೀರರಾಜೇಂದ್ರ ಪೇಟೆ ತಾಲ್ಲೂಕು, ಕೊಡಗು







ಸಾಂದರ್ಭಿಕ

# ಕನ್ನಡ ಸಾರಸ್ವತ ಲೋಕಕ್ಕೆ ಅಮೂಲ್ಯ ಕೊಡುಗೆ ನೀಡಿದ ಶಿಕ್ಷಣ ತಜ್ಞ ಪ್ರೊ. ಶಿ.ಶಿ. ಬಸವನಾಳರು

– ಎಚ್.ಎಸ್. ಸಿದ್ಧಗಂಗಪ್ಪ *

ಶಿಕ್ಷಣ, ಸಾಹಿತ್ಯ, ಪತ್ರಿಕೋದ್ಯಮ, ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿಶಿಷ್ಟ ಸೇವೆಯನ್ನು ಸಲ್ಲಿಸುವುದರ ಮೂಲಕ ಇತಿಹಾಸದ ಪುಟಗಳಲ್ಲಿ ತಮ್ಮ ಸಾಧನೆಗಳನ್ನು ದಾಖಲೆ ಮಾಡಿದ ಪ್ರೊ. ಶಿ.ಶಿ. ಬಸವನಾಳರು ನಾಡಿನ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಒಂದಾದ ಕೆ.ಎಲ್.ಇ. ಶಿಕ್ಷಣ ಸಂಸ್ಥೆಯ ಸ್ಥಾಪನೆಯ ರೂವಾರಿಗಳಲ್ಲಿ ಒಬ್ಬರೆಂದು ಹೇಳಲು ಅಭಿಮಾನವೆನಿಸುತ್ತದೆ.

ಪ್ರೊ. ಶಿ.ಶಿ. ಬಸವನಾಳರು ಕರ್ನಾಟಕದ ಶುದ್ಧ ಕನ್ನಡಿಗ ವ್ಯಕ್ತಿತ್ವದವರು. ಕನ್ನಡ ಭಾಷೆಯ ಬಗ್ಗೆ ಅವರಿಗಿದ್ದ ತೀವ್ರ ಕಾಳಜಿ, ಬದ್ಧತೆ, ನಿಸ್ವಾರ್ಥ ಅನುಪಮವಾದುದು. ಬೋಧನೆಯಲ್ಲಿ ವಿದ್ಯಾರ್ಥಿ ಪ್ರಿಯರು, ಸಂಘಟನೆಯಲ್ಲಿ ಜನಪ್ರಿಯರು. ಸಾಧನೆಯಲ್ಲಿ ಸಿದ್ಧಹಸ್ತರು, ಕೌಟುಂಬಿಕ ಬದುಕಿನಲ್ಲಿ ಸಮರ್ಥರು. ಇಡೀ ಸಮಾಜಕ್ಕೆ ಸೇವಾ ಕೇಂದ್ರವಾಗಿ ಶಕ್ತಿಯಾಗಿ ಬದುಕಿ ಸಮುದಾಯಕ್ಕೆ, ನಾಡಿಗೆ, ನುಡಿಗೆ ಸೇವೆ ಸಲ್ಲಿಸಿದ ಭಾಗ್ಯವಂತ ಪ್ರೊ. ಶಿ.ಶಿ. ಬಸವನಾಳರು ಬದುಕಿದ ರೀತಿ, ಮೂಡಿಸಿದ ಸಾಧನೆಯ ಹೆಜ್ಜೆ ಗುರುತುಗಳು, ಜನರ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯುವಂತಹವು.

**ಜನನ :** ಮಲೆನಾಡಿನ ಸೆರಗು ಎಂದೇ ಹೆಸರಾಗಿದ್ದ ಹಾವೇರಿಯಲ್ಲಿ ನವೆಂಬರ್ ೭, ೧೮೯೩ ರಲ್ಲಿ ಜನಿಸಿದರು. ತಂದೆ ಶಿವಯೋಗಪ್ಪನವರು ವೃತ್ತಿಯಲ್ಲಿ ಸ್ಟೇಷನ್ ಮಾಸ್ತರಾಗಿ ಬಳ್ಳಾರಿ ಜಿಲ್ಲೆಯ ದರೋಜಿ, ತೋರಣಗಲ್ಲು ಮತ್ತು ಕೊಟ್ಟೂರು ಪ್ರದೇಶಗಳಲ್ಲಿ ಸೇವೆ ಸಲ್ಲಿಸಿದ್ದರಿಂದ ಬಸವನಾಳರು ಬಳ್ಳಾರಿ ಸೀಮೆಯಲ್ಲಿಯೇ ತಮ್ಮ ಬಾಲ್ಯದ ದಿನಗಳನ್ನು ಕಳೆಯಬೇಕಾಯಿತು. ತಂದೆ ತಾಯಿಗಳು ಸಂಪ್ರದಾಯಸ್ಥರು, ದೈವಭಕ್ತಿಯುಳ್ಳವರಾಗಿದ್ದು, ಅತಿಥಿ ಸತ್ಕಾರಕ್ಕೆ ಹೆಸರಾಗಿದ್ದರು. ಶಿವಯೋಗಪ್ಪನವರು ಪುಸ್ತಕ ಪ್ರಿಯರಾಗಿದ್ದು ಅವರ ಮನೆಯಲ್ಲಿ ಅನೇಕ ಪುಸ್ತಕಗಳನ್ನು ಸಂಗ್ರಹಿಸಿದ್ದರು. ಓದುವ ಹವ್ಯಾಸ ಬಾಲಕ ಬಸವನಾಳರಿಗೆ ತಂದೆಯಿಂದ ಬಂದ ಬಳುವಳಿಯಾಗಿತ್ತು. ಮನೆಯಲ್ಲಿದ್ದ ಬಹುತೇಕ ಪುಸ್ತಕಗಳನ್ನು ಓದಿ ತಮ್ಮ ಜ್ಞಾನದಿಗಂತವನ್ನು ವಿಸ್ತರಿಸಿಕೊಂಡಿದ್ದರು.

ಬಾಲಕ ಬಸವನಾಳರ ಪ್ರತಿಭಾ ಶಕ್ತಿಯನ್ನು ಗಮನಿಸಿದ ಗುರುಗಳು ಒಂದೇ ವರ್ಷದಲ್ಲಿ ಎರಡು ತರಗತಿಗಳ ಪರೀಕ್ಷೆಗೆ ಕೂಡುವ ಅವಕಾಶವನ್ನು ಕಲ್ಪಿಸಿಕೊಟ್ಟರು. ತಮಗೆ ದೊರೆತ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡರು. ಹಾಗಾಗಿ ಆರು ವರ್ಷಗಳಲ್ಲಿ ಧಾರವಾಡದ ಸರ್ಕಾರಿ ಪ್ರೌಢಶಾಲೆಯಿಂದ ಮ್ಯಾಟ್ರಿಕ್‌ನಲ್ಲಿ ಉತ್ತೀರ್ಣರಾದರು. ಆಗ ಸರ್ಕಾರಿ ಕೆಲಸಕ್ಕೆ ಸೇರಲು ಸಾಕಷ್ಟು ಅವಕಾಶಗಳಿದ್ದವು, ಓದಬೇಕೆಂಬ ತುಡಿತ ಅವರನ್ನು ಪುಣೆಯವರೆಗೂ ಕರೆದೊಯ್ಯಿತು. ಅಲ್ಲಿನ ಪ್ರತಿಷ್ಠಿತ ಕಾಲೇಜು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ ಡೆಕ್ಕನ್ ಕಾಲೇಜಿಗೆ ಸೇರಿದರು. ಅಲ್ಲಿ ಇಂಟರ್ ಆರ್ಟ್ಸ್‌ನಲ್ಲಿ ಪಾಸಾದರು. ಅವರಲ್ಲಿನ ಜ್ಞಾನದ ಹಸಿವು ಇಂಗಲಿಲ್ಲ. ಉನ್ನತ ಶಿಕ್ಷಣಕ್ಕಾಗಿ ಮುಂಬೈಗೆ ಹೋಗಿ ಎಂ.ಎ. ತರಗತಿಗೆ ಸೇರಿಕೊಂಡರು.

ಮುಂಬೈಯಲ್ಲಿ ಆ ಭಾಗದ ಶ್ರೀಮಂತ ಲಿಂಗಾಯತ ವರ್ತಕರು ನಿಧಿಯನ್ನು ಸಂಗ್ರಹಿಸಿ ತಮ್ಮಲ್ಲಿಗೆ ವ್ಯಾಪಾರಕ್ಕೆಂದು ಬರುವ ಲಿಂಗಾಯತರಿಗೆ ವಸತಿ ಹಾಗೂ ಊಟಕ್ಕಾಗಿ ವೀರಶೈವ ಆಶ್ರಮ ಹೆಸರಿನ ಒಂದು ಆಶ್ರಮವನ್ನು ಸ್ಥಾಪಿಸಿದ್ದರು. ಈ ಆಶ್ರಮ ಸ್ಥಾಪಿಸಲು ಸೊಲ್ಲಾಪುರದ ಶ್ರೀಮಂತರಾಗಿದ್ದ ವಾರದ ಮಲ್ಲಪ್ಪನವರು, ಗಂಗಾಧರಪ್ಪ ಸಾವೇಜಿ ಮತ್ತು ಅವರ ಜತೆಗಾರರು ತುಂಬಾ ಶ್ರಮಿಸಿದ್ದರು. ಆಶ್ರಮದಲ್ಲಿ ಉನ್ನತ ವ್ಯಾಸಂಗ ಮಾಡುತ್ತಿದ್ದ ಬಡ ಲಿಂಗಾಯತ ವಿದ್ಯಾರ್ಥಿಗಳಿಗೂ ಊಟ-ವಸತಿ ಕಲ್ಪಿಸಲಾಗಿತ್ತು. ಬಸವನಾಳರು ಈ ಆಶ್ರಮದ ಪ್ರಯೋಜನವನ್ನು ಪಡೆದರು.

ಶ್ರೀ ಬಸವನಾಳರು ಆದರ್ಶ ವಿದ್ಯಾರ್ಥಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಡೆಕ್ಕನ್ ಕಾಲೇಜಿನಿಂದ ತ್ರೈಮಾಸಿಕ ಪತ್ರಿಕೆ ಕನ್ನಡ ವಿಭಾಗಕ್ಕೆ ಕೆಲಕಾಲ ಸಂಪಾದಕರಾಗಿ ಸೇವೆ ಮಾಡುವ ಅವಕಾಶ ಒದಗಿದ್ದು, ಇದು ಅವರ ಸ್ವಜನಾತ್ಮಕತೆಗೆ ವೇದಿಕೆ ಒದಗಿಸಿತು. ಕಾಲೇಜಿನಲ್ಲಿ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್,
ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ಬಸವನಾಳರಿಗೆ ಕನ್ನಡವನ್ನು ಕಲಿಯಲು ಅವಕಾಶವಿರಲಿಲ್ಲ. ಆ ಕೊರಗನ್ನು ನೀಗಿಸಲು ಸ್ವಪ್ರಯತ್ನದಿಂದ ಅಧ್ಯಯನ ಮಾಡಿ ಕನ್ನಡ ಭಾಷೆ, ಸಾಹಿತ್ಯ, ವ್ಯಾಕರಣಗಳಲ್ಲಿ ಪಾಂಡಿತ್ಯವನ್ನು ತಮ್ಮದಾಗಿಸಿಕೊಂಡರು. ಮರಾಠಿಮಯವಾಗಿದ್ದ ಪುಣೆಯಲ್ಲಿ ಕನ್ನಡ ಭಾಷೆಗೆ ಸೂಕ್ತ ಸ್ಥಾನಮಾನವಿರಲಿಲ್ಲ. ಈ ವಾತಾವರಣ ಕರ್ನಾಟಕ ವಿದ್ಯಾರ್ಥಿಗಳ ಮನಸ್ಸನ್ನು ಕೆರಳಿಸಿತು. ಪುಣೆಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ಸುಮಾರು ೪೦ ಲಿಂಗಾಯತ ವಿದ್ಯಾರ್ಥಿಗಳೆಲ್ಲ ಒಂದೆಡೆ ಸೇರಿ ಬೋರ್ಡಿಂಗ್‌ನ್ನು ಪ್ರಾರಂಭಿಸಿದರು. ಅವರೆಲ್ಲರೂ ಒಂದೇ ಮನೆಯವರಂತೆ ಪ್ರೀತಿ, ವಿಶ್ವಾಸದಿಂದ ಇರುತ್ತಿದ್ದರು, ಕನ್ನಡ ನಾಡು, ನುಡಿ ಹಾಗೂ ಲಿಂಗಾಯತ ಸಮಾಜಕ್ಕೆ ಸಂಬಂಧಿಸಿದ ವಿಷಯಗಳನ್ನು ಕುರಿತು ಚರ್ಚಿಸುತ್ತಿದ್ದರು. ಲಿಂಗಾಯತ ಸಮಾಜದ ಶೈಕ್ಷಣಿಕ ದೃಷ್ಟಿಯಿಂದ ಪ್ರಗತಿಯನ್ನು ಹೊಂದಲು ಸಮಾಜದ ಹಿರಿಯರು ಹಾಗೂ ಶ್ರೀಮಂತರು ಸೇರಿ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಗಹನವಾಗಿ, ಮುಕ್ತ ಮನಸ್ಸಿನಿಂದ ಚರ್ಚಿಸುತ್ತಿದ್ದರು. ಈ ಚರ್ಚೆಗಳು ಅಧ್ಯಯನದ ಮೇಲೆ ಪ್ರತಿಕೂಲವಾಗದಂತೆ ಎಚ್ಚರಿಕೆ ವಹಿಸುತ್ತಿದ್ದರು.

**ವೃತ್ತಿ ಜೀವನ :**

ಸ್ನಾತಕೋತ್ತರ ಪದವಿ ಪಡೆದ ಮೇಲೆ ಬೆಳಗಾವಿಯ ಗಿಲಗಂಚಿ ಅರಟಾಳ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿ ಜೀವನವನ್ನು ಆರಂಭಿಸಿ ಆರು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಬಡ ವಿದ್ಯಾಥಿಗಳಿಗೆ ಮಾತೃ ಸ್ವರೂಪರಾಗಿದ್ದರು. ಅವರು ಮಕ್ಕಳ ಬಗ್ಗೆ ತೋರುತ್ತಿದ್ದ ಪ್ರೀತಿಯ ಬಗ್ಗೆ ಅವರ ಧರ್ಮಪತ್ನಿ ಶ್ರೀಮತಿ ಶಾಂತಾ ಅವರು ಹೀಗೆ ಹೇಳಿದ್ದಾರೆ. "ಮನೆಯಲ್ಲಿ ಒಂದು ಬೆಲ್ಲದ ಪೆಟ್ಟಿಯನ್ನು ಅದರ ಪಕ್ಕದಲ್ಲಿಯೇ ತುಪ್ಪದ ಗಿಂಡಿಯನ್ನು ಹಾಗೂ ಬೆಲ್ಲವನ್ನು ಒಡೆದುಕೊಳ್ಳಲು ಒಂದು ಕಬ್ಬಿಣದ ಸಲಾಕೆಯನ್ನು ಇರಿಸಲಾಗುತ್ತಿತ್ತು. ಮನೆಗೆ ಬರುವ ವಿದ್ಯಾರ್ಥಿಗಳು ಸಲಾಕೆಯಿಂದ ಬೆಲ್ಲದ ಚಿಕ್ಕಣಿಕೆಯನ್ನು ಪಡೆದು ಅದನ್ನು ತುಪ್ಪದಲ್ಲಿ ಅದ್ದಿಕೊಂಡು ತಿನ್ನುತ್ತ ಸಂತೃಪ್ತಿಯನ್ನು ಸೂಸುತ್ತಿದ್ದರು. ಇದನ್ನು ನೊಡಿದ ಅರಟಾಳ ಸಾಹೇಬರು ತಿಂಗಳಲ್ಲಿ ಒಮ್ಮೆ ವಿದ್ಯಾರ್ಥಿಗಳಿಗೆಲ್ಲ ಹೋಳಿಗೆಯೂಟ ಹಾಕಿಸಬೇಕೆಂದು ನಗೆಯಾಡಿ, ಹೋಳಿಗೆಯೂಟವನ್ನು ಹಾಕಿಸಿದರು." ಇದು ಬಸವನಾಳರು ವಿದ್ಯಾರ್ಥಿಗಳ ಬಗ್ಗೆ ಇದ್ದ ಪ್ರೀತಿ, ಮಮತೆ, ಕಾಳಜಿಯನ್ನು ಸೂಚಿಸುತ್ತದೆ.

ಪ್ರೌಢಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾಗಲೇ ಬಸವನಾಳರು ತಮ್ಮ ವಿದ್ವತ್ ಹಾಗೂ ಕ್ರಿಯಾಶೀಲ ಚಟುವಟಿಕೆಗಳ ಮೂಲಕ ಬೆಳಗಾವಿಯಲ್ಲಿ ಅಂದು ಒಬ್ಬ ಯುವ ವಿದ್ವಾಂಸ ಹಾಗೂ ತರುಣ ಕಾರ್ಯಕರ್ತರೆಂದು ಗುರುತಿಸಿಕೊಂಡಿದ್ದರು. ಅವರು ಈ ಅವಧಿಯಲ್ಲಿ ಪ್ರಬೋಧ ಮಾಸಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡಿದ್ದರು. ನಂತರ ಬಸವನಾಳರು ಧಾರವಾಡದಲ್ಲಿ ಕರ್ನಾಟಕ ಲಿಂಗಾಯತ ಎಜ್ಯುಕೇಷನ್ ಸೊಸೈಟಿ ಪರವಾಗಿ ಒಂದು ಪ್ರೌಢಶಾಲೆಯನ್ನು ೧೯೨೨ ರಲ್ಲಿ ಆರಂಭಿಸಿದರು. ಇದನ್ನು ೧೯೩೦ ರಲ್ಲಿ ರಾಜಾ ಲಖಮಗೌಡ ಸರದೇಸಾಯಿ ಹೈಸ್ಕೂಲ್ ಎಂದು ಕರೆಯಲಾಯಿತು. ಆ ಶಾಲೆಗೆ ಮುಖ್ಯೋಪಾಧ್ಯಯರಾಗಿ ಸೇವೆ ಸಲ್ಲಿಸಿದರು.

ಬಸವನಾಳರು ಬೆಳಗಾವಿಯಿಂದ ಧಾರವಾಡಕ್ಕೆ ಬಂದ ಮೇಲೆ ಅವರ ಕಾರ್ಯಕ್ಷೇತ್ರದ ವ್ಯಾಪ್ತಿ ವಿಸ್ತಾರವಾಯಿತು. ಅವರೊಬ್ಬ ಕ್ರಿಯಾಶೀಲ ವ್ಯಕ್ತಿಯಾಗಿದ್ದು ವಿವಿಧ ಸಂಘ-ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ತಮ್ಮ ವ್ಯಕ್ತಿತ್ವದಿಂದ ಸಾರ್ವಜನಿಕ ಕ್ಷೇತ್ರದಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿ ಎಲ್ಲರ ಪ್ರೀತಿ, ವಿಶ್ವಾಸಕ್ಕೆ ಪಾತ್ರರಾಗಿದ್ದರು.

**ಸಹಕಾರ ಕ್ಷೇತ್ರ :**

ಶಿ.ಶಿ. ಬಸವನಾಳರು ಅರ್ಥಶಾಸ್ತ್ರ ಹಾಗೂ ರಾಜ್ಯಶಾಸ್ತ್ರದ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದು ಪ್ರಚಲಿತ ವಿದ್ಯಮಾನಗಳ ಬಗ್ಗೆ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದರು. ಸಹಕಾರಿ ಚಳುವಳಿಯಲ್ಲಿ ಭಾಗವಹಿಸಿ ಅರ್ಥ ವ್ಯವಸ್ಥೆಯ ಸಮಸ್ಯೆಗಳ ಬಗ್ಗೆ ಸಕಾರಣವಾಗಿ ಚರ್ಚಿಸುತ್ತಿದ್ದರು ಹಾಗೂ ಬ್ಯಾಂಕ್ ಸಾಧನಾ ಪಥದಲ್ಲಿ ಮುನ್ನಡೆಯಲು ಸಾಧ್ಯವಾದಂತಹ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ಅವರು ಮೂರು ವರ್ಷಗಳ ಕಾಲ ಧಾರವಾಡ-ಕರ್ನಾಟಕ ಸೆಂಟ್ರಲ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಾಗಿ ಸೇವೆ ಸಲ್ಲಿಸಿ ಬ್ಯಾಂಕಿನ ಅಭಿವೃದ್ಧಿಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟರು.

ಶ್ರೀ ಶಿ.ಶಿ. ಬಸವನಾಳರ ಪ್ರಾಮಾಣಿಕತೆ, ದಕ್ಷತೆ, ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆ, ಕ್ರಿಯಾಶೀಲತೆ, ಸಮಯೋಚಿತ ನಿರ್ಧಾರ ಇವುಗಳನ್ನು ಗಮನಿಸಿದ ಸಂಘ ಸಂಸ್ಥೆಗಳು, ಆಡಳಿತ ಮಂಡಳಿಯವರು ಅವರ ಸೇವೆಯನ್ನು ಬಳಸಿಕೊಳ್ಳಲು ಮುಂದಾದರು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಆಜೀವ ಸದಸ್ಯರಾಗಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಕಾರ್ಯಕಾರಿ ಮಂಡಳದ ಸದಸ್ಯರಾಗಿ, ಸಾಹಿತ್ಯ ಸಮಿತಿಯ ಕಾರ್ಯಾಧ್ಯಕ್ಷರಾಗಿ ಸಾಹಿತ್ಯ ಪ್ರಕಟನಾ ಕಾರ್ಯವನ್ನು, ಪ್ರಾಚೀನ ಗ್ರಂಥಗಳ ಪರಿಷ್ಕೃತ ಪ್ರಕಟಣೆಯನ್ನು ನಿರಂತರವಾಗಿ ಮಾಡುವಲ್ಲಿ ಅವರ ಪರಿಶ್ರಮ ಶ್ಲಾಘನೀಯವಾದುದು.

ಕರ್ನಾಟಕ ವಿದ್ಯಾವರ್ಧಕ ಸಂಘದ ವತಿಯಿಂದ ಪ್ರಕಟವಾಗುತ್ತಿದ್ದ ವಾಗ್ಭೂಷಣ ಮಾಸಪತ್ರಿಕೆಯ ಸಂಪಾದಕರಾಗಿ ಮೌಲಿಕ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಆ ಪತ್ರಿಕೆಯ ಘನತೆ, ಗೌರವವನ್ನು ಹೆಚ್ಚಿಸಿದರು. ಅಲ್ಲದೆ ಮುಂಬಯಿ ವಿಶ್ವವಿದ್ಯಾಲಯದ ಸುಧಾರಣಾ ಸಭೆಯ ಆಹ್ವಾನದ ಮೇರೆಗೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರತಿನಿಧಿಯಾಗಿ ಮುಂಬಾಯಿಗೆ ಹೋಗಿ ಕರ್ನಾಟಕಕ್ಕೆ ಸ್ವತಂತ್ರವಾದ ವಿಶ್ವವಿದ್ಯಾಲಯದ ಅಗತ್ಯತೆಯನ್ನು ಆಧಾರ ಸಹಿತ ಮನವರಿಕೆ ಮಾಡಿಕೊಟ್ಟರು. ಅವರು ಅನೇಕ ಉಪ ಸಮಿತಿಗಳ ಸದಸ್ಯರಾಗಿ, ಕಾರ್ಯದರ್ಶಿಗಳಾಗಿ, ಅಧ್ಯಕ್ಷರಾಗಿ ಅಮೂಲ್ಯ ಸೇವೆ ಸಲ್ಲಿಸಿದರು.

ಶ್ರೀ ಶಿ.ಶಿ. ಬಸವನಾಳರು ತಮ್ಮ ಒಡನಾಡಿಗಳೊಂದಿಗೆ ಸುತ್ತಮುತ್ತಲಿನವರೊಂದಿಗೆ ಮಧುರ ಬಾಂಧವ್ಯವನ್ನಿಟ್ಟು ಕೊಂಡಿದ್ದರು. ೧೯೨೪ ರಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ವೀರಶೈವ







ತರುಣ ಸಂಘದ ವತಿಯಿಂದ ಅಖಿಲ ಭಾರತ ವೀರಶೈವ ತರುಣ ಸಮ್ಮೇಳನವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀ ಶಿ.ಶಿ. ಬಸವನಾಳರು ವಹಿಸಿದ್ದರು. ಈ ಸ್ಥಾನ ಅವರಿಗೆ ೩೧ನೇ ವಯಸ್ಸಿನಲ್ಲಿ ದೊರಕಿದ್ದು ಅವರ ವಿದ್ವತ್‌ಗೆ ಸಂದ ಗೌರವ. ೧೯೩೧ ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದವರು ಏರ್ಪಡಿಸಿದ್ದ ಸಮಾರಂಭಕ್ಕೆ ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಿದ್ದರು. ಈ ಸಮಾರಂಭದಲ್ಲಿ ಬಿ.ಎಂ. ಶ್ರೀಕಂಠಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಶ್ರೀ ಶಿ.ಶಿ. ಬಸವನಾಳರು ಯಾವುದೇ ಸಮಾರಂಭಕ್ಕೆ ಹೋಗಲಿ ಪೂರ್ವಸಿದ್ಧತೆ ಮಾಡಿಕೊಂಡು ಹೋಗುತ್ತಿದ್ದರು. ಅವರು ಆ ವೇಳೆಗಾಗಲೇ ಉತ್ತಮ ವಾಗ್ಮಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ಕರ್ನಾಟಕ ಏಕೀಕರಣ ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ಸ್ಥಾಪನೆ, ಅಗತ್ಯಗಳ ಬಗ್ಗೆ ಮನ ಮುಟ್ಟುವಂತೆ ವಿಚಾರಗಳನ್ನು ಮಂಡಿಸಿದ್ದರು. ಮೈಸೂರು ಪ್ರದೇಶದವರೊಂದಿಗೆ ಉತ್ತರ ಕರ್ನಾಟಕದ ಸಾಂಸ್ಕೃತಿಕ ಮಧುರ ಬಾಂಧವ್ಯ ಉಂಟಾಗುವುದಕ್ಕೆ ಶ್ರೀ ಬಸವನಾಳರ ಕೊಡುಗೆ ಅನುಪಮವಾದುದು. ಬಸವನಾಳರು ಧಾರವಾಡದಲ್ಲಿದ್ದಾಗ ಅನೇಕ ಕಾರ್ಯಕ್ರಮಗಳನ್ನು, ಸಮ್ಮೇಳನಗಳನ್ನು ಏರ್ಪಡಿಸಿ ಯಶಸ್ವಿಯಾಗಿ ನಡೆಯಲು ವಹಿಸಿದ ಪಾತ್ರ ಮಹತ್ತರವಾದುದು.

**ಹೃದಯ ವೈಶ್ಯಾಲತೆ :**

ದೊಡ್ಡವರು ಯಾವಾಗಲೂ ದೊಡ್ಡದನ್ನೇ ಯೋಚಿಸುತ್ತಾರೆ ಎಂಬುದಕ್ಕೆ ಪ್ರೊ. ಶಿ.ಶಿ. ಬಸವನಾಳ ಅವರು ಜೀವನದಲ್ಲಿ ನಡೆದ ಒಂದು ಘಟನೆಯನ್ನು ಉಲ್ಲೇಖಿಸುವುದು ಉಚಿತವೆನಿಸುತ್ತದೆ. ಬಹುದಿನಗಳ ನಿರಂತರ ಹೋರಾಟದ ಫಲವಾಗಿ ಕರ್ನಾಟಕ ಲಿಂಗಾಯತ ಎಜ್ಯುಕೇಷನ್ ಸೊಸೈಟಿ ವತಿಯಿಂದ ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜು ಸ್ಥಾಪನೆಯಾಯಿತು. ಆಗ ಶಿ.ಶಿ. ಬಸವನಾಳರಿಗೆ ಕಾಲೇಜಿನ ಪ್ರಾಚಾರ್ಯರಾಗುವ ಅವಕಾಶವಿತ್ತು. ಅವರು ಎಂದಿಗೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. ಅವರು ಈ ಹಿಂದೆ ಗಿಲಿಗುಂಚಿ ಅರಟಾಳ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿದ್ದಾಗ ತಮ್ಮ ವಿದ್ಯಾರ್ಥಿಯಾಗಿದ್ದು, ವಿದೇಶದಲ್ಲಿ ಪಿ.ಎಚ್‌ಡಿ. ಪದವಿ ಪಡೆದು ಕೆ.ಎಲ್.ಇ. ಸೊಸೈಟಿಯ ಸಂಸ್ಥೆಯಲ್ಲಿಯೇ ಸೇವೆ ಸಲ್ಲಿಸುತ್ತಿದ್ದ ಡಾ. ಶಿ.ಚೆ. ನಂದೀಮಠರೇ ಪ್ರಾಚಾರ್ಯರ ಹುದ್ದೆಗೆ ಅರ್ಹರೆಂದು ನಿರ್ಧರಿಸಿದರು. ಅವರನ್ನು ಕರೆದು ನೀವು ಪ್ರಾಚಾರ್ಯರರಾಗಬೇಕು, ನಾನು ಪ್ರಾಧ್ಯಾಪಕನಾಗಿಯೇ ಇದ್ದು ಕೆಲಸ ಮಾಡುತ್ತೇನೆ ಎಂದು ಹೇಳಿದಾಗ ನಂದೀಮಠರು ಮೂಕವಿಸ್ಮಿತರಾದರು. ಅವರ ತ್ಯಾಗವನ್ನು ಇಡೀ ಸಮಾಜವೇ ಮೆಚ್ಚಿಕೊಂಡಿತು. ತಾವೊಬ್ಬರೇ ಬೆಳೆಯ ಬೇಕೆನ್ನದೆ ಕಿರಿಯರು ಬೆಳೆಯಬೇಕು ಎಂಬ ಉದಾರತೆ, ಹೃದಯ ವೈಶಾಲ್ಯತೆ ಪ್ರಶಂಸನೀಯವಾದುದು. ಪ್ರೊ. ಶಿ.ಶಿ. ಬಸವನಾಳರ ಮಾನವೀಯತೆ, ಉದಾರತೆಯನ್ನು ಕುರಿತು ಡಾ. ನಂದೀಮಠ ಅವರು ತಮ್ಮ ಭಾವನೆಯನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

"ವಯಸ್ಸಿನಿಂದ ಚಿಕ್ಕವನಾದರೂ ನನ್ನನ್ನು ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲರನ್ನಾಗಿ ಮಾಡಿ, ತಾವು ಸಹ ಕಾರ್ಯಕರ್ತೃಗಳಾಗಿ ಶ್ರೀ ಶಿ.ಶಿ. ಬಸವನಾಳರು ದುಡಿದರು. ಇದರಿಂದ ಇವರ ಘನತೆಯು ವ್ಯಕ್ತವಾಗುತ್ತದೆ. ಇವರ ಕೂಡ ಕೆಲಸ ಮಾಡುವ ಸುಯೋಗವು ಬಂದುದಕ್ಕಾಗಿ ನನಗೆ ಒಂದು ರೀತಿಯಿಂದ ತೃಪ್ತಿಯಾಗಿದೆ." ಒಬ್ಬ ಶಿಷ್ಯ ತನ್ನ ಗುರುವಿಗೆ ನೀಡಿದ ಮಹೋನ್ನತ ಗೌರವ. ಅವಕಾಶವನ್ನು ಕಲ್ಪಿಸಿ ಕೊಟ್ಟ ಗುರುವೂ ದೊಡ್ಡವರಾದರು, ಕೊಟ್ಟ ಅವಕಾಶವನ್ನು ಸದುಪಯೋಗಿಸಿಕೊಂಡು ಗುರುವಿನ ಆಶಯದಂತೆ ನಡೆದು ಶಿಷ್ಯರೂ ದೊಡ್ಡವರಾದರು.

ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಡಾ. ಆರ್.ಸಿ. ಹಿರೇಮಠರು ಪ್ರೊ. ಶಿ.ಶಿ. ಬಸವನಾಳರು ವಿದ್ಯಾರ್ಥಿಯಾಗಿದ್ದರು. ಅವರ ಬೋಧನೆ ಕುರಿತು ಡಾ. ಹಿರೇಮಠರು ತಮ್ಮ ಮನದಾಳದ ಮಾತುಗಳನ್ನು ಹೀಗೆ ಹಂಚಿಕೊಂಡಿದ್ದಾರೆ. "ಪ್ರೊ. ಬಸವನಾಳರು ಜನ್ಮತಃ ರಸಿಕರು. ಮಹಾಕವಿಗಳು, ಹೃದಯವನ್ನರಿಯುವ ಅಪಾರವಾದ ಆಸಕ್ತಿ ಅವರಿಗಿದ್ದಿತು. ಅವರು ಕನ್ನಡ ಪ್ರಾಧ್ಯಾಪಕರಾಗಿ ಲಿಂಗರಾಜ ಕಾಲೇಜಿನ ಬಿ.ಎ., ಎಂ.ಎ. ವರ್ಗದಲ್ಲಿ ಪಂಪ, ರನ್ನ, ಹರಿಹರ, ರಾಘವಾಂಕರಂತಹ ಮಹಾಕವಿಗಳ ಕಾವ್ಯಗಳನ್ನು ಅರ್ಥೈಸ ತೊಡಗಿದರೆ ಆಗ ನೋಡಬೇಕು ಅವರ ತಾದಾತ್ಮ ಸ್ಥಿತಿಯನ್ನು, ರಸಿಕತೆಯನ್ನು, ವಿಮರ್ಶಕ ಶಕ್ತಿಯನ್ನು ಮುಂದೆ ಕುಳಿತು ಕೇಳುವವರಲ್ಲಿ ಭಾವಪರವಶತೆಯನ್ನುಂಟು ಮಾಡುವ ಶಕ್ತಿ ಅವರಲ್ಲಿದ್ದಿತು" ಈ ಮಾತುಗಳು ಪ್ರೊ. ಬಸವನಾಳರ ವ್ಯಕ್ತಿತ್ವವನ್ನು ಅನಾವರಣ ಮಾಡುತ್ತವೆ.

ಪ್ರೊ. ಶಿ.ಶಿ. ಬಸವನಾಳ ಅವರಿಗೆ ಇತಿಹಾಸವೆಂದರೆ ತುಂಬಾ ಅಚ್ಚುಮೆಚ್ಚಿನದಾಗಿತ್ತು. ಅವರು ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವುದಕ್ಕಿಂತ ಮೊದಲೇ ಎರಡು ಇತಿಹಾಸದ ಗ್ರಂಥಗಳನ್ನು ಲೋಕಾರ್ಪಣೆ ಮಾಡಿದ್ದರು. ಶ್ರೀ ಹಲಗವಿ ಹಂಪಯ್ಯನವರೊಂದಿಗೆ ಪ್ರಕಟಿಸಿದ ನಾಲ್ಕುನೂರು ಪುಟಗಳ ಭಾರತದ ಇತಿಹಾಸವು ವರ್ಣ್ಯಾಕ್ಯುಲರ್ ಪಠ್ಯಪುಸ್ತಕ ಸಮಿತಿಯಿಂದ ಪಠ್ಯಪುಸ್ತಕವಾಗಿ ಅಂಗೀಕಾರವಾಗಿತ್ತು. ಈ ಕೃತಿ ಏಳು ವರ್ಷಗಳ ಅವಧಿಯಲ್ಲಿ ಐದು ಪುನರ್ ಮುದ್ರಣಗಳನ್ನು ಕಂಡ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಮತ್ತೊಂದು ಕೃತಿ ಇಂಗ್ಲೆಂಡಿನ ಅರ್ವಾಚೀನ ಇತಿಹಾಸ ಎನ್ನುವ ಕೃತಿ ಶ್ರೀ ಹಲಗವಿ ಹಂಪಯ್ಯನವರೊಂದಿಗೆ ಪ್ರಕಟಿಸಿದ್ದು, ಅದು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ಮುಂಬೈ ಸರ್ಕಾರದ ಶಿಕ್ಷಣ ಇಲಾಖೆಯಿಂದ ಮಂಜೂರಾಗಿತ್ತು.

ಲಿಂಗರಾಜ ಕಾಲೇಜಿನಲ್ಲಿ ಪ್ರೊ. ಬಸವನಾಳರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳ ಮಾನಸಿಕ ಹಾಗೂ ಬೌದ್ಧಿಕ ವಿಕಾಸಕ್ಕಾಗಿ ಹಲವಾರು ಪಠ್ಯೇತರ ಚಟುವಟಿಕೆಗಳನ್ನು ಹಮ್ಮಿಕೊಂಡು ಅವುಗಳು ಯಶಸ್ವಿಯಾಗಿ ಸಾಕಾರಗೊಳ್ಳುವಂತೆ ನೋಡಿಕೊಂಡರು. ವಿದ್ಯಾರ್ಥಿಗಳಲ್ಲಿ ಸೃಜನಶೀಲತೆಯನ್ನು ಬೆಳೆಸುವ ಆಶಯ ಅವರದಾಗಿತ್ತು. ಕನ್ನಡ ನಾಡು ನುಡಿಯ ಬಗ್ಗೆ ವಿದ್ಯಾರ್ಥಿಗಳಲ್ಲಿ ಜಾಗೃತಿಯನ್ನು ಮೂಡಿಸುವ ದೃಷ್ಟಿಯಿಂದ ಕರ್ನಾಟಕ ಸಾಹಿತ್ಯ ಸಂಘವನ್ನು ಪ್ರಾರಂಭಿಸಿದರು. ಸಂಘದ ಮೂಲಕ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು

ಅನುಷ್ಠಾನಗೊಳಿಸಿದರು. ಸಂಘದ ಧ್ಯೇಯೋದ್ದೇಶಗಳನ್ನು ಹೀಗೆ ಹೇಳಲಾಗಿದೆ. "ಈ ಸಂಘವು ಮಾಡತಕ್ಕ ಕಾರ್ಯವು ಎರಡು ಬಗೆಯದಾಗಿದೆ. ಇದು ಮುಖ್ಯವಾಗಿ ಮಾಡಬೇಕಾದ ಕೆಲಸ, ವಿದ್ಯಾರ್ಥಿ ವರ್ಗದಲ್ಲಿ ಕನ್ನಡ ಭಾಷೆಯ ಮೇಲೆ ಮಮತೆಯನ್ನು, ಉತ್ಸಾಹವನ್ನು ಹುಟ್ಟಿಸಿ ಬೆಳೆಸುವುದು. ಕನ್ನಡ ಸಾಹಿತ್ಯದಲ್ಲಿ ಒಳ್ಳೆಯ ಕವಿಗಳಾರು ? ಉತ್ತಮವಾದ ಗ್ರಂಥಗಳಾವುವು? ಆಧುನಿಕ ಸಾಹಿತ್ಯದ ಸ್ಥಿತಿಯೇನು ? ಇದೇ ಅವಶ್ಯವಾದ ಕಾರ್ಯ. ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಬಗ್ಗೆ ಹಾಗೂ ತಮ್ಮ ಇತಿಹಾಸ ಸಂಸ್ಕೃತಿಗಳ ಬಗ್ಗೆ ಜ್ಞಾನ ಅಷ್ಟಕಷ್ಟೆ. ಆದುದರಿಂದ ಇಂತಹ ಅಜ್ಞಾನವನ್ನು ಹೋಗಲಾಡಿಸುವುದು ಈ ಸಂಘವು ಕೈಗೊಳ್ಳತಕ್ಕ ಮಹತ್ವದ ಕಾರ್ಯ. ಇನ್ನೂ ಎರಡನೆಯದಾಗಿ ಅಭ್ಯಾಸ ಮಂಡಲವನ್ನು ಏರ್ಪಡಿಸಿ ಸಾಹಿತ್ಯದಲ್ಲಿ ಅಭಿರುಚಿಯುಳ್ಳ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯ ಬೇಕೆಂಬ ಉತ್ಸಾಹ, ಶಕ್ತಿಯುಳ್ಳ ವಿದ್ಯಾರ್ಥಿಗಳನ್ನು ವಿಮರ್ಶೆಯ ಕಾರ್ಯದಲ್ಲಿಯಾಗಲಿ, ಸಂಶೋಧನೆಯ ಕಾರ್ಯದಲ್ಲಿಯಾಗಲಿ ತೊಡಗಿಸುವುದು ಕನ್ನಡ ಸಾಹಿತ್ಯದಲ್ಲಿ ಮಾಡಬೇಕಾದ ಕಾರ್ಯವು ಅಪಾರವಾಗಿದೆ".

ಸಂಘದ ವತಿಯಿಂದ ಏರ್ಪಡಿಸುವ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗುತ್ತಿತ್ತು. ಪ್ರತಿ ಕಾರ್ಯಕ್ರಮಕ್ಕೂ ನಾಡಿನ ಪ್ರಸಿದ್ಧ ವಿದ್ವಾಂಸರನ್ನು ಬರಮಾಡಿಕೊಂಡು ನಮ್ಮ ನಾಡಿನ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿತ್ತು. ವಿದ್ಯಾರ್ಥಿಗಳಿಗೆ ಲೇಖನ ಸ್ಪರ್ಧೆಗಳನ್ನು ಏರ್ಪಡಿಸುವುದರ ಮೂಲಕ ಬೌದ್ಧಿಕ ಬೆಳವಣಿಗೆಗೆ ಅವಕಾಶ ಕಲ್ಪಿಸಿಕೊಡಲಾಗಿತ್ತು. ವೇದಿಕೆಯಲ್ಲಿ ಮಾತನಾಡಲು ಪ್ರೋತ್ಸಾಹಿಸಲಾಗುತ್ತಿತ್ತು. ಒಟ್ಟಾರೆ ಈ ಎಲ್ಲಾ ಕಾರ್ಯಕ್ರಮಗಳಿಂದ ಪ್ರೊ. ಶಿ.ಶಿ. ಬಸವನಾಳರು ಸಂಘವು ಚೈತನ್ಯದಿಂದ ಕೂಡುವ ವಾತಾವರಣವನ್ನು ಉಂಟು ಮಾಡಿದ್ದರು.

ಪ್ರೊ. ಶಿ.ಶಿ. ಬಸವನಾಳರು ಒಂಭತ್ತು ವರ್ಷಗಳ ಕಾಲ ಲಿಂಗರಾಜ ಕಾಲೇಜಿನ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಈ ಅವಧಿಯಲ್ಲಿ ಪ್ರಿನ್ಸಿಪಾಲರಾಗಿದ್ದ ತಮ್ಮ ಶಿಷ್ಯ ಡಾ. ಶಿ.ಚಿ. ನಂದೀಮಠ ಅವರಿಗೆ ಕಾಲೇಜಿನ ಅಭಿವೃದ್ಧಿಗೆ ಸೂಕ್ತ ಸಲಹೆ, ಮಾರ್ಗದರ್ಶನ ನೀಡಿ ಕಾಲೇಜಿಗೆ ಕೀರ್ತಿ ಬರುವಂತೆ ಮಾಡಿದರು.

**ವಿವಿಧ ಸಂಘ ಸಂಸ್ಥೆಗಳಲ್ಲಿ :**

ಈಗಾಗಲೇ ಪ್ರಸ್ತಾಪಿಸಿದಂತೆ ಬೆಳಗಾವಿಯಲ್ಲಿ ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ ಸ್ಥಾಪನೆಯಲ್ಲಿ ಪ್ರೊ. ಶಿ.ಶಿ. ಬಸವನಾಳರ ಪಾತ್ರ ಪ್ರಮುಖವಾದುದು. ಏಳು ಜನ ಪದವೀಧರರ ದೂರದೃಷ್ಟಿ, ಪರಿಶ್ರಮ, ನಿಸ್ವಾರ್ಥ, ಪ್ರಾಮಾಣಿಕ ಪ್ರಯತ್ನದಿಂದ ಇಂದು ನಾಡಿನ ಪ್ರತಿಷ್ಠಿತ ಶಿಕ್ಷಣ ಸಂಸ್ಥೆ ಕೆ.ಎಲ್.ಇ. ಪ್ರಾರಂಭವಾಗಲು ಇವರ ಕೊಡುಗೆ ಅಪಾರವಾದುದು. ಅಂದು ಅವರು ನೆಟ್ಟ ಸಸಿ ಇಂದು ಬೃಹತ್ ವೃಕ್ಷವಾಗಿ ಬೆಳೆದು ಆ ನೆರಳಿನಲ್ಲಿ ನೂರಾರು ಶಿಕ್ಷಣ ಸಂಸ್ಥೆಗಳು ಸೇವೆ ಸಲ್ಲಿಸುತ್ತಿವೆ.

ಕರ್ನಾಟಕ ಹೆಮ್ಮೆಯ ವಿಶ್ವವಿದ್ಯಾಲಯಗಳಲ್ಲಿ ಒಂದಾದ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಯಾಗಲು ಪ್ರೊ ಶಿ.ಶಿ. ಬಸವನಾಳರ ಸಂಘಟನೆ, ಕ್ರಿಯಾಶೀಲತೆ, ಈ ಭಾಗದಲ್ಲಿ ಒಂದು ವಿಶ್ವವಿದ್ಯಾಲಯವಾಗಬೇಕೆಂಬ ಕಳಕಳಿ, ಸ್ಥಾಪನೆಯಲ್ಲಿ ತೋರಿದ ಅದಮ್ಯ ಉತ್ಸಾಹ, ವಿಶ್ವವಿದ್ಯಾಲಯದ ಇತಿಹಾಸದಲ್ಲಿ ದಾಖಲಾಗುವಂತಹದು. ವಿಶ್ವವಿದ್ಯಾಲಯ ಸ್ಥಾಪನೆಯಾಗಲು ರಾವಬಹದ್ದೂರ ಅರಟಾಳ ರುದ್ರೇಗೌಡರ ಕೊಡುಗೆ ಅಪಾರ. ಅವರು ಲಿಂಗಾಯತ ಸಮಾಜದ ಪರವಾಗಿ ಒಂದು ಲಕ್ಷಕ್ಕೂ ಹೆಚ್ಚಿಗೆ ಹಣ ಸಂಗ್ರಹಿಸಿ ಕೊಟ್ಟರೆಂಬುದನ್ನು ಅಭಿಮಾನದಿಂದ ಕೃತಜ್ಞತೆಯಿಂದ ಸ್ಮರಿಸಬೇಕಾಗುತ್ತದೆ. ಈ ಕಾಲೇಜಿನ ಸ್ಥಾಪನೆಯಾದ ಮೇಲೆ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಗೆ ನಾಂದಿಯಾಯಿತು.

೧೯೪೦ ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಇಪ್ಪತ್ತೈದನೆಯ ಅಧಿವೇಶನದ ಅಧ್ಯಕ್ಷರಾಗಿದ್ದ ಪ್ರೊ. ಶಿ.ಶಿ. ಬಸವನಾಳರು ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಯ ಅಗತ್ಯವನ್ನು ಎಳೆಎಳೆಯಾಗಿ ಮಂಡಿಸಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಯಾಗಲು ತಮ್ಮೆಲ್ಲರ ಸಹಕಾರ ಅಗತ್ಯವೆಂದು ನಿವೇದಿಸಿಕೊಂಡರು. ಪ್ರೊ. ಬಸವನಾಳರ ಜೊತೆ ಅನೇಕ ಜನ ಶಿಕ್ಷಣ ಪ್ರೇಮಿಗಳ ಒತ್ತಾಸೆ, ಸಹಕಾರ ಪ್ರಾಮಾಣಿಕ ಪ್ರಯತ್ನವನ್ನು ಮರೆಯುವಂತಿಲ್ಲ. ಅವರೆಲ್ಲರ ಕೊಡುಗೆ ಅಪೂರ್ವವಾದುದು. ಪ್ರೊ. ಮಾಳವಾಡ ಮತ್ತು ಶ್ರೀ ವೀರಭದ್ರಪ್ಪ ಹಾಲಭಾವಿ, ಸಬ್‌ಜಡ್ಜ್ ಇವರನ್ನೊಳಗೊಂಡ ಸಮಿತಿಯವರು ಸಿದ್ಧಪಡಿಸಿ ಸಾದರಪಡಿಸಿದ ವರದಿಯ ಮೇರೆಗೆ ೧೯೪೯ರಲ್ಲಿ ಮುಂಬೈ ವಿಧಾನ ಸಭೆಯಲ್ಲಿ ಯುನಿವರ್ಸಿಟಿ ಆಕ್ಟ್ ಅಂಗೀಕಾರವಾಗಿ ವಿಶ್ವವಿದ್ಯಾಲಯವು ಜುಲೈ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂದು ಆಗಸ್ಟ್ ತಿಂಗಳಲ್ಲಿ ತನ್ನ ಕಾರ್ಯವನ್ನು ಆರಂಭಿಸಿತು. ಬಹುದಿನಗಳ ಹೋರಾಟಕ್ಕೆ ಫಲ ದೊರೆಯಿತು. ಅಕ್ಟೋಬರ್ ತಿಂಗಳಿನಲ್ಲಿ ಧಾರವಾಡದ ಗಂಡು ಮಕ್ಕಳ ಸರಕಾರಿ ತರಬೇತಿ ಕಾಲೇಜಿನ ಕಟ್ಟಡಕ್ಕೆ ಸ್ಥಳಾಂತರವಾಯಿತು. ಸರ್ಕಾರದಿಂದ ಪ್ರೊ. ಬಸವನಾಳರನ್ನು ವಿಶ್ವವಿದ್ಯಾಲಯದ ಸಲಹಾ ಮಂಡಳಿಯ ಸದಸ್ಯರಾಗಿ ನೇಮಕಗೊಂಡುದಲ್ಲದೆ ೧೯೫೦ ರ ಜನವರಿಯಲ್ಲಿ ನಡೆದ ಚುನಾವಣೆಗಳ ಮೂಲಕ ರಚಿತವಾದ ವಿವಿಧ ಅಧಿಕಾರ ಮಂಡಳಿಗಳಲ್ಲಿ ಮತ್ತು ಸಮಿತಿಗಳಲ್ಲಿ ಸದಸ್ಯರಾಗಿ ಆಯ್ಕೆಯಾದರು. ಕರ್ನಾಟಕ ವಿಶ್ವವಿದ್ಯಾಲಯದ ಲಾಂಛನ (Emblem) ತಯಾರಿಸುವಲ್ಲಿ ಪ್ರೊ. ಬಸವನಾಳರು ಡಾ. ನಂದೀಮಠ ಅವರ ಜೊತೆಯಲ್ಲಿ ಸಮಾಲೋಚನೆ ನಡೆಸಿ ಅದಕ್ಕೆ ತಾತ್ವಿಕ ಅರ್ಥ ವಿವರಣೆ ನೀಡುವಲ್ಲಿ ಅವರು ವಹಿಸಿದ ಪಾತ್ರ, ಪರಿಶ್ರಮ ಅಪಾರವಾದುದು.

**ವೀರಶೈವ ತರುಣ ಸಂಘಗಳು :**

ಮೊದಲ ಬಾರಿಗೆ ೧೯೧೧ ರಲ್ಲಿ ಬೆಳಗಾವಿಯಲ್ಲಿ ವೀರಶೈವ ಸಮ್ಮೇಳನವನ್ನು ಬ್ಯಾರಿಸ್ಟರ ಗರಡಿ ರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಸಂಘಟಿಸಲಾಗಿತ್ತು. ಸಮ್ಮೇಳನ ಅರ್ಥಪೂರ್ಣವಾಗಿ, ಯಶಸ್ವಿಯಾಗಿ ನಡೆಯಿತು. ಆ ಸಮ್ಮೇಳನದಲ್ಲಿ ಗ್ರಾಮಗಳಲ್ಲಿ ವೀರಶೈವ ತರುಣ ಸಂಘಗಳನ್ನು ಸ್ಥಾಪಿಸಿ, ಆ ಮೂಲಕ



ವಾಚನಾಲಯ, ಬೋರ್ಡಿಂಗ್ ಮೊದಲಾದವುಗಳನ್ನು ಪ್ರಾರಂಭಿಸಿ, ತರುಣರಲ್ಲಿ ಅರಿವಿನ ಜ್ಯೋತಿ ಬೆಳಗಿಸುವ ವಾತಾವರಣವನ್ನು ನಿರ್ಮಾಣ ಮಾಡಬೇಕೆಂದು ಗೊತ್ತುವಳಿಯನ್ನು ಅಂಗೀಕರಿಸಲಾಯಿತು. ಅಲ್ಲದೆ ವೀರಶೈವ ತರುಣ ಸಂಘದ ಪರವಾಗಿ ಒಂದು ಮಾಸಿಕ ಪತ್ರಿಕೆಯನ್ನು ಪ್ರಕಟಿಸಬೇಕೆಂದೂ ತೀರ್ಮಾನಿಸಲಾಯಿತು. ಪ್ರಕಟಣೆಗೆ ಹಣವೂ ಸಂಗ್ರಹವಾಯಿತು. ಪತ್ರಿಕೆ ಹೊರತರುವ ಹೊಣೆಯನ್ನು ಪ್ರೊ. ಶಿ.ಶಿ. ಬಸವನಾಳರಿಗೆ ಹೊರಿಸಲಾಯಿತು. ನಿರ್ಣಯದಂತೆ ಪ್ರಬೋಧ ಎಂಬ ಹೆಸರಿನ ಮಾಸಿಕವನ್ನು ಪ್ರಕಟಿಸಲಾಯಿತು. ಎರಡು ವರ್ಷ ಯಾವುದೇ ಅಡೆತಡೆಯಿಲ್ಲದೆ ಪ್ರಕಟಿಸಲಾಯಿತು. ಆದರೆ ಮಹಾಯುದ್ಧ ನಡೆದುದರಿಂದ ಮುದ್ರಣಕಾಗದದ ಬೆಲೆ ಗಗನಕ್ಕೇರಿತು. ಅಷ್ಟು ಹಣವನ್ನು ಭರಿಸಲಾಗದೆ ತಾತ್ಕಾಲಿಕವಾಗಿ ಪತ್ರಿಕೆಯನ್ನು ನಿಲ್ಲಿಸಲಾಯಿತು. ೧೯೨೧ ರಲ್ಲಿ ನಾಲ್ಕನೆಯ ವೀರಶೈವ ಸಮ್ಮೇಳನವನ್ನು ಆಯೋಜಿಸಲಾಗಿದ್ದ ಸಂದರ್ಭದಲ್ಲಿ ಸ್ಥಗಿತವಾಗಿದ್ದ ಪ್ರಬೋಧ ಪತ್ರಿಕೆಯ ಪ್ರಕಟಣೆ ಬಸವನಾಳರ ಸಂಪಾದಕತ್ವದಲ್ಲಿ ಮುಂದುವರಿದು ಒಂದು ಅತ್ಯುತ್ತಮ ಪತ್ರಿಕೆ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಈ ಸಂದರ್ಭದಲ್ಲಿ ಶ್ರೀ ಬಸವನಾಳರು, ಶ್ರೀ ಕಟ್ಟೀಮನಿಯವರು, ಅನೇಕ ಮಿತ್ರರ ಸಹಕಾರ ಹಾಗೂ ವಿವಿಧ ಮೂಲಗಳಿಂದ ಹಣವನ್ನು ಸಂಗ್ರಹಿಸಿ ತೋಂಟದಾರ್ಯ ಮುದ್ರಣಾಲಯವನ್ನು ಸ್ಥಾಪಿಸಿ ತನ್ಮೂಲಕ ಪ್ರಬೋಧ ಪತ್ರಿಕೆಯನ್ನು ಮುದ್ರಿಸುವಂತಾಯಿತು.

ಕರ್ನಾಟಕ ವಿದ್ಯಾವರ್ಧಕ ಸಂಘ ಹಾಗೂ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸ್ಥಾಪನೆಯಾಗಲು ಶ್ರೀ ಬಸವನಾಳರು ಹಾಗೂ ಅವರ ಸಹ ಚಿಂತಕರ ಕೊಡುಗೆ ಅಪಾರವಾದುದು. ಬಸವನಾಳರು ಕಾರ್ಯಾಧ್ಯಕ್ಷರಾಗಿದ್ದ ಅವಧಿಯಲ್ಲಿ ವಿದ್ಯಾವರ್ಧಕ ಸಂಘದ ಚಟುವಟಿಕೆಗಳು ವಿಸ್ತಾರಗೊಂಡವು. ಗ್ರಂಥಗಳ ಪ್ರಕಟಣೆಗೆ ಪ್ರೋತ್ಸಾಹ, ಕನ್ನಡ ಪರೀಕ್ಷೆಗಳು, ಉಪನ್ಯಾಸ ಮಾಲಿಕೆ, ನಾಡಹಬ್ಬದ ಕಾರ್ಯಕ್ರಮ, ಕರ್ನಾಟಕ ಏಕೀಕರಣ ಚಳವಳಿ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುವುದರ ಮೂಲಕ ಸಂಘದ ಘನತೆ, ಗೌರವ ಹೆಚ್ಚಾಗುವಂತೆ ಮಾಡಿದುದು ಅವರ ಕಾರ್ಯಕ್ಷಮತೆಯ ದ್ಯೋತಕ.

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸ್ಥಾಪನೆಯ ಹಿಂದೆ ಹಲವಾರು ಮಹಾಮಹಿಮರ ಕಳಕಳಿ, ಸಂಘಟನೆ, ದೂರದೃಷ್ಟಿ ಪ್ರಾಮಾಣಿಕ ಪರಿಶ್ರಮವಿದೆ. ಅದು ನಡೆದು ಬಂದ ಹಾದಿ ರೋಚಕವಾದುದು. ಈ ಸಂಸ್ಥೆಯ ಸ್ಥಾಪನೆಯ ಹಿಂದೆ ಒಂದು ಬಲವಾದ ಕಾರಣವೂ ಇತ್ತು. ಬಹುಕಾಲದಿಂದ ಕರ್ನಾಟಕದಲ್ಲಿ ನೆಲೆಸಿದ ವೀರಶೈವ ಸಮಾಜವು ಅನ್ಯಮತೀಯ ಆಳರಸರಿಂದ ಹಾಗೂ ಅಧಿಕಾರಿಗಳಿಂದ ನಿರ್ಲಕ್ಷಕ್ಕೆ ಒಳಗಾಗಿ ಶೋಚನೀಯ ಸ್ಥಿತಿಯಲ್ಲಿತ್ತು. ಬ್ರಿಟಿಷರ ಆಳ್ವಿಕೆಯಲ್ಲಿ ರಸೆಲ್ ಮತ್ತು ಡೆಪ್ಯುಟಿ ಚೆನ್ನಬಸಪ್ಪನವರ ಅವಿರತ ಪ್ರಯತ್ನಗಳಿಂದ ವೀರಶೈವ ಸಮಾಜದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಮಹತ್ವ ದೊರೆಯಿತು. ಅದರಿಂದ ಕಲೆಕ್ಟರ್ ರಾ.ಬ. ಗಿಲಗಂಚಿ ಗುರುಸಿದ್ಧಪ್ಪ ಮತ್ತು ಡೆಪ್ಯೂಟಿ ಚಿಟ್ನೀಸ್‌ರಾಗಿದ್ದ ರಾಂಬ ಅರಟಾಳ ರುದ್ರೇಗೌಡ ಅವರಿಗೆ ಸಮಾಜದ ಮೇಲಿದ್ದ ಕಳಕಳಿ, ದೂರದೃಷ್ಟಿಯಿಂದ ಅನೇಕ ಜನ ಮುಖಂಡರ ನೆರವು, ಸಹಕಾರದಿಂದ ಲಿಂಗಾಯತ ಅಭಿವೃದ್ಧಿ ಸಂಸ್ಥೆ ಸ್ಥಾಪಿಸಲಾಯಿತು. ಈ ಸಂಸ್ಥೆ ಸ್ಥಾಪನೆಯ ಮೂಲೋದ್ದೇಶ ಲಿಂಗಾಯತ ಸಮಾಜದಲ್ಲಿ ಇಂಗ್ಲೀಷ್ ಭಾಷೆಯ ಮೇಲ್ತರದ ಶಿಕ್ಷಣ ಮತ್ತು ಸಂಸ್ಕೃತ ಹಾಗೂ ಆಧ್ಯಾತ್ಮಿಕತೆಯ ಸಂಬಂಧ ಶಿಕ್ಷಣವನ್ನು ಪ್ರಸಾರ ಮಡುವುದೇ ಆಗಿತ್ತು. ೧೮೮೮ ರಲ್ಲಿ ಈ ಸಂಸ್ಥೆಯನ್ನು ಲಿಂಗಾಯತ ಎಜ್ಯುಕೇಷನ್ ಫಂಡ ಕಮಿಟಿ ಎಂದು ಕರೆಯಲಾಗಿತ್ತು. ೧೯೦೬ ರಲ್ಲಿ ಈ ಹೆಸರನ್ನು ಲಿಂಗಾಯತ ಎಜ್ಯುಕೇಷನ್ ಅಸೋಸಿಯೇಷನ್ (ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ) ಎಂದು ಬದಲಿಸಲಾಯಿತು.

ಪ್ರೊ. ಶಿ.ಶಿ. ಬಸವನಾಳರು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯೊಂದಿಗೆ ಮೊದಲಿನಿಂದಲೂ ಅವಿನಾಭಾವ ಸಂಬಂಧವನ್ನು ಹೊಂದಿದ್ದರು. ಕಾರ್ಯಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸುವುದರ ಮೂಲಕ ಸಂಸ್ಥೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತೆಯಿಂದ ತಮ್ಮನ್ನು ತೊಡಗಿಸಿಕೊಂಡಿದ್ದರು.

ಸಾಹಿತ್ಯ ಮತ್ತು ಸಂಸ್ಕೃತಿಯ ಸಂವರ್ಧನೆಗಾಗಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ವತಿಯಿಂದ ಸಾಹಿತ್ಯ ಸಮಿತಿಯನ್ನು ರಚಿಸಿ ಅದರ ಜವಾಬ್ದಾರಿಯನ್ನು ಪ್ರೊ. ಶಿ.ಶಿ. ಬಸವನಾಳ ಅವರಿಗೆ ನೀಡಿತು. ತಮಗೆ ದೊರೆತ ಅವಕಾಶವನ್ನು ಬಸವನಾಳರು ಸದುಪಯೋಗಪಡಿಸಿಕೊಂಡರು. ಶ್ರೀ ಗೋಪಾಲಕೃಷ್ಣ ಗೋಖಲೆಯವರಿಂದ ಸ್ಥಾಪಿತವಾದ 'Servants of Indian Society' ಮಾದರಿಯಲ್ಲಿಯೇ ಸಮಿತಿಯನ್ನು ರೂಪಿಸಬೇಕೆಂಬುದು ಅವರ ಮನದ ಹಿಂಗಿತವಾಗಿತ್ತು. ಪ್ರತಿತಿಂಗಳು ವೀರಶೈವ ಧರ್ಮ ಸಾಹಿತ್ಯಗಳನ್ನು ಕುರಿತು ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸುವುದರ ಜೊತೆಗೆ ಸಂಶೋಧನೆ ಮತ್ತು ಪ್ರಾಚೀನ ವೀರಶೈವ ಗ್ರಂಥಗಳ ಪರಿಷ್ಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಸಾಹಿತ್ಯ ಸಮಿತಿ ಸ್ಥಾಪನೆಗೊಂಡ ಹದಿಮೂರು ವರ್ಷಗಳ ಅವಧಿಯಲ್ಲಿ ಚೆನ್ನಬಸವ ಪುರಾಣ, ಪ್ರಭುಲಿಂಗ ಲೀಲೆ, ಶಭರ ಶಂಕರ ವಿಲಾಸ, ವೀರಶೈವ ತತ್ತ್ವ ಪ್ರಕಾಶ, ಶಂಕರ ದಾಸಿಮಯ್ಯ ಪುರಾಣ, ಗಿರಿಜಾ ಕಲ್ಯಾಣ 'Musings of Basava - A Hand Book of Veerashaivism, A Memoir to Raja L.B. Sardesai, Commemoration Volume to Raja L.B. Sardesai of 'Vantamuri' ಹೀಗೆ ಹನ್ನೆರಡು ಗ್ರಂಥಗಳನ್ನು, ಹರಿಹರನ ಐದು ರಗಳೆಗಳನ್ನು ಪ್ರಕಟಿಸಲಾಯಿತು. ಅಲ್ಲದೆ ಶಿ.ಶಿ. ಬಸವನಾಳರು ಪರಿಷ್ಕರಿಸಿದ ಬಸವಣ್ಣನವರ ಷಟಸ್ಥಳದ ವಚನಗಳು ಗ್ರಂಥ ಪ್ರಕಟಣೆ ಮಾಡಲಾಯಿತು.

ಪ್ರೊ. ಶಿ.ಶಿ. ಬಸವನಾಳರು ನಿರಂತರ ಪ್ರಯತ್ನ ಹಾಗೂ ಕಾಳಜಿಯಿಂದ ವೀರಶೈವ ಸಾಹಿತ್ಯದಲ್ಲಿಯ ಅಮೂಲ್ಯ ಗ್ರಂಥಗಳು





ಬೆಳಕು ಕಾಣುವಂತಾಯಿತು. ಅಷ್ಟೇ ಅಲ್ಲದೆ ಅನೇಕ ಮೂಲ ಮಾತೃಕೆಗಳ ಸಹಾಯದಿಂದ ವಿದ್ವಾಂಸರು ಸಿದ್ಧಪಡಿಸಿದ ಮೂಲಪಾಠ, ಪಾಠಾಂತರಗಳ ಅಡಿಟಿಪ್ಪಣಿ, ವಿದ್ವತ್‌ನಿಂದ ಕೂಡಿದ ಸಂಶೋಧನಾತ್ಮಕ ಮುನ್ನುಡಿ, ಕಠಿಣ ಶಬ್ದಗಳ ಕೋಶ, ಇವುಗಳಿಂದ ಕೂಡಿದ ಗ್ರಂಥ ಪ್ರಕಟಣೆಗಳು ವಿದ್ವಾಂಸರ ಗಮನ ಸೆಳೆದುದಲ್ಲದೆ, ಮೇಲ್ಮಟ್ಟದ ಮಾದರಿಗಳೆನಿಸಿದವು. ಈ ಗ್ರಂಥಗಳು ಮುಂಬೈ ಹಾಗೂ ಮೈಸೂರು ವಿಶ್ವವಿದ್ಯಾಲಯಗಳ ವಿವಿಧ ತರಗತಿಗಳಿಗೆ ಪಠ್ಯಪುಸ್ತಕಗಳಾದವು. ಈ ಗ್ರಂಥಗಳು ವಿದ್ವಾಂಸರಿಂದ ಪ್ರಶಂಸಿಸಲ್ಪಟ್ಟು ಹಲವಾರು ಮುದ್ರಣಗಳನ್ನು ಕಂಡವು.

**ಆಕಾಶವಾಣಿ ಕೇಂದ್ರ :**

ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪನೆ ಪ್ರೊ. ಶಿ.ಶಿ. ಬಸವನಾಳರ ಪ್ರಯತ್ನದಿಂದ ಸಾಧ್ಯವಾಯಿತು. ಇವರ ಜೊತೆಗೆ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಉತ್ತರ ಕರ್ನಾಟಕದ ಇತರ ಸಂಘ ಸಂಸ್ಥೆಗಳ ಒತ್ತಡ, ಪ್ರಯತ್ನಗಳನ್ನು ಮರೆಯುವಂತಿಲ್ಲ. ೧೯೪೦ ರಲ್ಲಿ ಧಾರವಾಡದಲ್ಲಿ ನಡೆದ ೨೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರ ಭಾಷಣದಲ್ಲಿ ಅವರು ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪನೆಯ ಅಗತ್ಯವನ್ನು ಹೀಗೆ ಪ್ರಸ್ತಾಪಿಸಿದ್ದಾರೆ. "ಆಕಾಶವಾಣಿಯ ಕಾರ್ಯಕ್ರಮದಲ್ಲಿ ಕನ್ನಡಕ್ಕೆ ಪ್ರಾತಿನಿಧ್ಯ ದೊರೆಯಬೇಕಾದುದು ಪ್ರಾಂತದ ಪ್ರಮುಖ ಭಾಷೆಗಳಲ್ಲಿಯೂ ಕನ್ನಡವು ಒಂದೆಂದು ತೋರಲು ದಿಲ್ಲಿಯ ಅಖಿಲ ಭಾರತ ಆಕಾಶವಾಣಿಯ ಕೇಂದ್ರದಿಂದ ಕನ್ನಡ ಕಾರ್ಯಕ್ರಮಗಳನ್ನು ಏರ್ಪಡಿಸುವ ಸಾಹಸ ಮಾಡಬೇಕು. ಇಷ್ಟಾದರೆ ನಮ್ಮ ಕಾರ್ಯ ಮುಗಿದಂತಾಗಲಿಲ್ಲ. ನಮ್ಮ ಸರ್ವಶಕ್ತಿಯುನ್ನು ವಿನಿಯೋಗಿಸಿ ಕರ್ನಾಟಕದಲ್ಲೊಂದು ಆಕಾಶವಾಣಿ ನಿಲ್ದಾಣ (Radio Station)ವು ಸ್ವತಂತ್ರವಾಗಿ ಏರ್ಪಡುವಂತೆ ಮಾಡಿ ಸಾಧ್ಯವಾದರೆ ಕೇಂದ್ರ ಸ್ಥಳವಾದ ಧಾರವಾಡ ನಗರದಲ್ಲಿ ಅಥವಾ ಒಪ್ಪಬಹುದಾದ ಮತ್ತೊಂದು ಠಾವಿನಲ್ಲಿ ಸ್ಥಾಪಿಸುವುದು ನಮ್ಮೆಲ್ಲರ ಹಿರಿದಾಸೆ" ಎಂದು ಹೇಳುವುದರ ಮೂಲಕ ಆಕಾಶವಾಣಿ ಕೇಂದ್ರ ಸ್ಥಾಪನೆಯ ಅಗತ್ಯತೆಯುನ್ನು ಮನವರಿಕೆ ಮಾಡುವುದರ ಜೊತೆಗೆ ಜಯಕರ್ನಾಟಕ ಪತ್ರಿಕೆಯಲ್ಲಿ ಈ ಕುರಿತು ಸಂಪಾದಕೀಯ ಲೇಖನಗಳನ್ನು ಬರೆದು ಒತ್ತಾಯಿಸಿದ್ದರಿಂದ ಆಕಾಶವಾಣಿ ಕೇಂದ್ರ ಧಾರವಾಡದಲ್ಲಿ ಸ್ಥಾಪನೆಯಾಯಿತು.

**ವೀರಶೈವ ಮಹಾಸಭೆ :**

ಪ್ರೊ. ಶಿ.ಶಿ. ಬಸವನಾಳರು ಅಖಿಲ ಭಾರತ ವೀರಶೈವ ಮಹಾಸಭೆಯೊಂದಿಗೆ ನಿಕಟ ಬಾಂಧವ್ಯವನ್ನಿಟ್ಟು ಕೊಂಡಿದ್ದರು. ಇವರ ನಿಸ್ವಾರ್ಥ ಸೇವೆ ಮತ್ತು ಆಳವಾದ ಪಾಂಡಿತ್ಯವನ್ನು ಗಮನಿಸಿ ೧೯೩೪ ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ಅಖಿಲ ಭಾರತ ವೀರಶೈವ ಮಹಾಸಭೆಯ ೧೩ನೆಯ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಅವರು ಸುಮಾರು ೨೭ ಪುಟಗಳ ಸುದೀರ್ಘವಾದ ಅಧ್ಯಕ್ಷ ಭಾಷಣದಲ್ಲಿ ವ್ಯಕ್ತಪಡಿಸಿದ ಆಲೋಚನೆಗಳು ಅವರ ಉದಾತ್ತವಾದ ಸಾಮಾಜಿಕ ಹಾಗೂ ಧಾರ್ಮಿಕ ಚಿಂತನೆಯ ಮುನ್ನೋಟವಾಗಿದೆ.

**ವಿವಿಧ ಸಂಘ ಸಂಸ್ಥೆಗಳಲ್ಲಿ :**

ಪ್ರೊ. ಶಿ.ಶಿ. ಬಸವನಾಳರು ಕನ್ನಡ ಸಾಹಿತ್ಯ ಪರಿಷತ್ತು, ರಾಯಲ್ ಏಸಿಯಾಟಿಕ್ ಸೊಸೈಟಿ, ಪಿ.ಈ.ಎನ್. ಕನ್ನಡ ಸಂಶೋಧನ ಸಂಸ್ಥೆ (ಧಾರವಾಡ), ಕಿತ್ತೂರು ಚೆನ್ನಮ್ಮ ಇತಿಹಾಸ ಮಂಡಳಿ, ಮೈಸೂರಿನ ಶ್ರೀ ಸುತ್ತೂರು ಮಠ, ಧಾರವಾಡದ ಮುರುಘಾಮಠವೂ ಸೇರಿದಂತೆ ನಾಡಿನ ವಿವಿಧ ಭಾಗಗಳ ಸಾಹಿತ್ಯಿಕ, ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಘ-ಸಂಸ್ಥೆಗಳೊಂದಿಗೆ ನಿಕಟವಾದ ಸಂಪರ್ಕವನ್ನಿಟ್ಟು ಕೊಂಡಿದ್ದು ಕಾಲಕಾಲಕ್ಕೆ ಸೂಕ್ತ ಸಲಹೆ, ಮಾರ್ಗದರ್ಶನ ನೀಡಿ ಆ ಸಂಘ ಸಂಸ್ಥೆಗಳು ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ಅನುಪಮ ಕೊಡುಗೆಯನ್ನು ನೀಡಿದ್ದರು.

**ಸಾಹಿತ್ಯ ಕ್ಷೇತ್ರ :**

ಶ್ರೀ ಹ.ಚ. ಹಲಗಲಿ, ಶ್ರೀ ಚೆ.ಎ. ಕವಲಿಯವ ರೊಂದಿಗೆ ರಚಿಸಿದ ಇಂಗ್ಲೆಂಡ್‌ರ ಅರ್ವಾಚೀನ ಇತಿಹಾಸ ಭಾಗ-೧, ೨, ಹಿಂದೂಸ್ತಾನದ ಇತಿಹಾಸ, ವಿರೂಪಾಕ್ಷ ಪಂಡಿತ ವಿರಚಿತ ಚೆನ್ನಬಸವ ಪುರಾಣ, ಕನ್ನಡ ಚೆನ್ನುಡಿ ಕೃತಿಗಳು ಪಠ್ಯಪುಸ್ತಕಗಳಾಗಿದ್ದವು. ಅಲ್ಲದೆ ವಿರೂಪಾಕ್ಷ ಪಂಡಿತ ಕೃತ ಚೆನ್ನಬಸವ ಪುರಾಣ, ಚಾಮರಸ ಕೃತ ಪ್ರಭುಲಿಂಗಲೀಲೆ, ನಾಗವರ್ಮನ ಕೃತ ಕಾವ್ಯಾವ ಲೋಕನಂ, ಮಹಾಕವಿ ಶ್ರೀ ಷಡಕ್ಷರದೇವ ವಿರಚಿತಃ ಕರ್ನಾಟಕ ಶಬಾನು ಶಾಸನ ಪ್ರಕಾಶಿಕೆ, ರೇವಣಸಿದ್ಧೇಶ್ವರ ದೇವರ ರಗಳೆ, ವೀರಶೈವ ತತ್ತ್ವಪ್ರಕಾಶ, ರಕ್ಷಾಶತಕ ಮತ್ತು ಪಂಚಾಶತಕ, ಕೈವಲ್ಯ ದರ್ಪಣ, ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು, ಶ್ರೀ ಸರ್ಪಭೂಷಣ ಶಿವಯೋಗಿ ವಿರಚಿತಂ, ಶ್ರೀ ಬಸವಣ್ಣನವರ ಷಟ್‌ಸ್ಥಲದ ವಚನಗಳು, ಶ್ರೀ ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು ಗ್ರಂಥಗಳನ್ನು ಸಂಪಾದಿಸಿಕೊಟ್ಟಿದ್ದಾರೆ.

ಐವತ್ತೆಂಟು ವರ್ಷ ಈ ಲೋಕಕ್ಕೆ ವಿದಾಯ ಹೇಳುವ ವಯಸ್ಸಲ್ಲ. ಆದರೆ ವಿಧಿಯ ಲೀಲೆಯನ್ನು ಬಲ್ಲವರಾರು! ಡಿಸೆಂಬರ್ ೨೨, ೧೯೫೧ ರಂದು ಸಾರ್ಥಕ ಬದುಕನ್ನು ನಡೆಸಿ ವಿಧಿವಶರಾದರು. ಆದರೆ ಅವರ ಆದರ್ಶ ವ್ಯಕ್ತಿತ್ವ, ಮಾಡಿದ ಸಾಧನೆಗಳು ಸದಾ ಚಿರನೂತನ. ಕೆ.ಎಲ್.ಇ. ವಿದ್ಯಾ ಸಂಸ್ಥೆ, ಆಕಾಶವಾಣಿ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಅವರು ಸಂಪಾದಿಸಿಕೊಟ್ಟ ಗ್ರಂಥಗಳು ಇರುವತನಕ ಪ್ರೊ. ಶಿ.ಶಿ. ಬಸವನಾಳರು ಧ್ರುವ ನಕ್ಷತ್ರವಾಗಿ ಕಂಗೊಳಿಸುತ್ತಲೇ ಇರುತ್ತಾರೆ.





ಕ್ಷೇತ್ರವಾರ್ತೆ

# ಶ್ರೀಮಠದಲ್ಲಿ ನಡೆದ 'ಕನ್ನಡ ರಾಜ್ಯೋತ್ಸವ' ಹಾಗೂ 'ಮಕ್ಕಳ ದಿನಾಚರಣೆ' ಸಮಾರಂಭ

ಶ್ರೀಮಠದಲ್ಲಿ ನವೆಂಬರ್ ೧೪ ರಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಸರಳವಾಗಿ, ಅರ್ಥಪೂರ್ಣವಾಗಿ **'ಕನ್ನಡ ರಾಜ್ಯೋತ್ಸವ' ಹಾಗೂ 'ಮಕ್ಕಳ ದಿನಾಚರಣೆ'** ಸಮಾರಂಭ ನಡೆಯಿತು. ಪೂಜ್ಯರು ತಮ್ಮ ನುಡಿಸಂದೇಶದಲ್ಲಿ ಕನ್ನಡ ಭಾಷೆಗೆ ಸಾಧು-ಸಂತರ, ದಾರ್ಶನಿಕರ, ಬಸವಾದಿ ಶರಣರು ನೀಡಿದ ಅಮೂಲ್ಯ ಕೊಡುಗೆಯನ್ನು ತಿಳಿಸಿದರು. ಈ ಸಂದರ್ಭದಲ್ಲಿ ಮಕ್ಕಳ ದಿನಾಚರಣೆಯ ಶುಭಾಶಯಗಳನ್ನು ಕೋರಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ಚಲನಚಿತ್ರ ನಟರಾದ ಶ್ರೀ ಶರತ್ ಲೋಹಿತಾಶ್ವ ಅವರು ತಮ್ಮ ಭಾಷಣದಲ್ಲಿ ಕರ್ನಾಟಕದ ಇತಿಹಾಸ, ಕನ್ನಡ ಭಾಷೆಯ ಮಹತ್ವವನ್ನು ವಿವರಿಸಿ, ಕನ್ನಡಕ್ಕೆ ಕೊಡುಗೆ ನೀಡಿದ ಸಾಹಿತಿ, ಕಲಾವಿದರ ಸಾಧನೆಯ ಹೆಜ್ಜೆ ಗುರುತುಗಳನ್ನು ಸ್ಮರಿಸಿದರು.





ಸಮಾರಂಭದಲ್ಲಿ ಭಾಗವಹಿಸಿದ್ದ ಹಿರಿಯ ಸಿವಿಲ್ ನ್ಯಾಯಾಧೀಶರೂ ಹಾಗೂ ತುಮಕೂರು ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳಾದ ಶ್ರೀ ರಾಘವೇಂದ್ರ ಶೆಟ್ಟಿಗಾರ ಅವರು ಮಕ್ಕಳ ಹಕ್ಕುಗಳನ್ನು ಪರಿಚಯ ಮಾಡಿಕೊಟ್ಟರಲ್ಲದೆ, ಸುಭಾಷಿತಗಳನ್ನು ಉದಾಹರಿಸುವ ಮೂಲಕ ವಿದ್ಯಾರ್ಥಿಗಳಿಗೆ ಕರ್ತವ್ಯದ ಅರಿವನ್ನು ಮೂಡಿಸಿದರು. ನಾವು ಕಾನೂನುಗಳನ್ನು ರಕ್ಷಿಸಿದರೆ, ಕಾನೂನು ನಮ್ಮನ್ನು ರಕ್ಷಿಸುತ್ತದೆ ಎಂದು ಕಿವಿಮಾತು ಹೇಳಿದರು.

ಹಿರಿಯ ಸಂಸ್ಕೃತ ವಿದ್ವಾಂಸರು, ಶ್ರೀಮಠದ ಪರಮಭಕ್ತರೂ ಆಗಿದ್ದ ಲಿಂ. ಸಿ.ಎಂ. ರುದ್ರರಾಧ್ಯ ಶರ್ಮರು ಹಾಗೂ ಲಿಂ. ವಿಮಲಮ್ಮ ಅವರ ಸ್ಮರಣೆಗಾಗಿ ಅವರ ಪುತ್ರರಾದ ಶ್ರೀ ಸಿ.ಆರ್. ಬಸವರಾಜ ಅವರು ನೀಡಿದ ನಗದು ಬಹುಮಾನವನ್ನು ಪಬ್ಲಿಕ್ ಟಿ.ವಿ.ಯ ಕಾರ್ಯಕ್ರಮ ನಿರ್ವಾಹಕರಾದ ಶ್ರೀ ಅರುಣ್ ಬಡಿಗೇರ್ ಅವರು ಶಕ್ತಿವಿಶಿಷ್ಟಾದ್ವೈತ ವೇದಾಂತ ಶಾಸ್ತ್ರದ ಅಂತಿಮ ವರ್ಷದ ಎಂ.ಎ. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣರಾದ ಶ್ರೀ ಬಸವ ರಮಾನಂದ ಸ್ವಾಮಿಗಳು, ಶ್ರೀ ಷಣ್ಮುಖೇಶ್ವರ ಶಿವಾಚಾರ್ಯ ಸ್ವಾಮಿಗಳು, ಶ್ರೀ ಮಹಾಲಿಂಗ ಸ್ವಾಮಿಗಳವರಿಗೆ ವಿತರಿಸಿ, ವಿದ್ಯಾರ್ಥಿಗಳು ಉತ್ತಮ ರೀತಿಯಲ್ಲಿ ಅಧ್ಯಯನ ಮಾಡಿ ಸಮಾಜದಲ್ಲಿ ಸತ್ಪ್ರಜೆಗಳಾಗಿ ರೂಪುಗೊಳ್ಳಬೇಕೆಂದು ಕರೆ ನೀಡಿದರು.

ಸಮಾರಂಭದ ಅಂಗವಾಗಿ ಮಾತನಾಡುವ ಗೊಂಬೆ ಎಂದೇ ಪ್ರಸಿದ್ಧರಾದ ಶ್ರೀಮತಿ ಇಂದುಶ್ರೀ ಅವರು ಕಾರ್ಯಕ್ರಮವನ್ನು ನಡೆಸಿಕೊಟ್ಟು ರಂಜಿಸಿದರು.

ಡಾ. ಎಸ್.ಎಸ್. ನಿರಂಜನಮೂರ್ತಿಯವರು ಸರ್ವರನ್ನೂ ಸ್ವಾಗತಿಸಿದರು. ಡಾ. ಸಿ. ಅಶ್ವತ್ಥಪ್ಪ ಬಹುಮಾನಿತರ ಪಟ್ಟಿಯನ್ನು ವಾಚಿಸಿದರು. ಡಾ. ಅಮರಗೋಪಾಲ ಅವರು ಶರಣು ಸಮರ್ಪಣೆ ಮಾಡಿದರು. ವಿದ್ವಾನ್ ಕೆ.ಎನ್. ವೀರಭದ್ರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು.

## ಕ್ಷೇತ್ರವಾರ್ತೆ

# ಹಿರಿಯ ಸಂಸ್ಕೃತ ವಿದ್ವಾಂಸರಾದ ವಿದ್ವಾನ್ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರ ಅಭಿನಂದನಾ ಸಮಾರಂಭ

ದಿನಾಂಕ ೨೦-೧೧-೨೦೨೧ಶನಿವಾರ ಶ್ರೀಕ್ಷೇತ್ರದಲ್ಲಿ ಮಹಾಮಹೋಪಾಧ್ಯಾಯ ವಿದ್ವಾನ್ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರವರ ಅಭಿನಂದನಾ ಮತ್ತು ಕೃತಿಗಳ ಲೋಕಾರ್ಪಣಾ ಸಮಾರಂಭವು ಜರುಗಿತು. ಸಮಾರಂಭದ ದಿವ್ಯಸಾನ್ನಿಧ್ಯವನ್ನು ಶ್ರೀ ಸಿದ್ಧಗಂಗಾಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ವಹಿಸಿದ್ದರು. ನೆಲಮಂಗಲದ ಪವಾಡಶ್ರೀ ಬಸವಣ್ಣದೇವರ ಮಠಾಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಉಪಸ್ಥಿತರಿದ್ದರು. ಸಿದ್ಧಗಂಗ ತಾಂತ್ರಿಕ ಮಹಾವಿದ್ಯಾಲಯದ ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪನವರು ಸಮಾರಂಭದ ಉದ್ಘಾಟನೆಯನ್ನು ಮಾಡಿದರು. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ನಿವೃತ್ತ ಪ್ರಾಕ್ತನ ಉಪಕುಲಪತಿಗಳಾದ ಶಾಸ್ತ್ರಚೂಡಾಮಣಿ ಮಲ್ಲೇಪುರಂ ಜಿ ವೆಂಕಟೇಶ್‌ರವರು ಅಭಿನಂದನಾ ಭಾಷಣವನ್ನು ಮಾಡಿದರು.

ಡಾ. ಎಂ.ಎನ್. ಚನ್ನಬಸಪ್ಪನವರು ಕಾರ್ಯಕ್ರಮವನ್ನು ಉದ್ಘಾಟಿಸುತ್ತಾ ವಿದ್ವಾಂಸರಾದ ಎಂ.ಎನ್. ಲಕ್ಷ್ಮೀನರಸಿಂಹಭಟ್ಟರವರನ್ನು ಶ್ರೀಮಠದಿಂದ ಅಭಿನಂದಿಸುತ್ತಿರುವುದು ಔಚಿತ್ಯಪೂರ್ಣವಾಗಿದೆ ಎಂದು ನುಡಿದರು. ಮಲ್ಲೇಪುರಂ ಜಿ ವೆಂಕಟೇಶ್‌ರವರು ನಾನೂ ಕೂಡ ಭಟ್ಟರವರ ಶಿಷ್ಯನಾಗಿದ್ದು ಅವರ ಸರಳವಾದ ಸುಭೋಧವಾದ ಪಾಠವನ್ನು ಕೇಳಿ ಆನಂದಿಸಿದ್ದೇನೆ. ಭಟ್ಟರವರ ದೇಹಕೃಶವಾಗಿದ್ದರೂ ಅವರ ಬುದ್ಧಿ ಮತ್ತು ಧ್ವನಿಯು ಮೊದಲಿನ ಹಾಗೆಯೇ ಚುರುಕಾಗಿದೆ ಮುಂತಾಗಿ ಗುರುಗಳಿಗೆ ಅಭಿನಂದನಾ ನುಡಿಯನ್ನು ಸಲ್ಲಿಸಿದರು. ನಂತರ ಶ್ರೀ ಭಟ್ಟರವರು ಸಂಸ್ಕೃತ ಕವಿ ಭೋಜದೇವನ ಸಂಸ್ಕೃತದಲ್ಲಿರುವ ಚಂಪೂರಾಮಾಯಣವನ್ನು ಸರಳವಾಗಿ ಸುಂದರವಾಗಿ ಕನ್ನಡಭಾಷೆಯಲ್ಲಿ ಅನುವಾದಿಸಿರುವ ಕೃತಿಯನ್ನು ಬಿಡುಗಡೆ ಮಾಡಿದರು. ಅದರ ಜೊತೆಯಲ್ಲಿ ವಿದ್ವಾನ್ ಕೋ.ರಂ. ಬಸವರಾಜು ಅವರ ರಚಿಸಿರುವ 'ಶಿವಾದ್ವೈತಪರಿಭಾವನೆ' ಎಂಬ ವೇದಾಂತ ಹೊತ್ತಗೆಯನ್ನು ಲೋಕಾರ್ಪಣೆ ಮಾಡಿದರು. ಈ ಉಭಯ ಕೃತಿಗಳನ್ನು ಕುರಿತು ಮೌಲಿಕವಾದ ವಿಮರ್ಶೆಯನ್ನು ಮಾಡಿದರು.

ಸಪತ್ನೀಕರಾಗಿ ಅಭಿನಂದನೆಯನ್ನು ಸ್ವೀಕರಿಸಿದ ಭಟ್ಟರವರು ಮಾತನಾಡುತ್ತಾ ನನ್ನ ಮೇಲಿನ ಅಭಿಮಾನದಿಂದ ಇಷ್ಟೊಂದು ವೈಭವಯುತವಾಗಿ ನನ್ನನ್ನು ಅಭಿನಂದಿಸುತ್ತಿರುವುದಕ್ಕೆ ಅನಂತಾನಂತ ಧನ್ಯವಾದಗಳು. ನನ್ನನ್ನು ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯನ್ನು ದಯಪಾಲಿಸಿ ವಿಶ್ವಾಸದಿಂದ ಕಾಪಾಡಿದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಗಳವರಿಗೆ ಅನಂತ ಧನ್ಯವಾದಗಳು. ಸ್ವಾಮೀಜಿಯವರು ಸಂಸ್ಥೆಯನ್ನು ಇಷ್ಟು ಬೃಹತ್ತಾಗಿ ಬೆಳೆಸುವುದಕ್ಕೆ ಪಟ್ಟ ಕಾರ್ಪಣ್ಯಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ. ಅಂತಹ ಪೂಜ್ಯರಿಗೆ ಕೋಟಿ ಕೋಟಿ ನಮಸ್ಕಾರಗಳು. ಇಂದಿನ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಕೂಡ ಅಷ್ಟೇ ವಿಶ್ವಾಸವನ್ನಿಟ್ಟುಕೊಂಡಿದ್ದಾರೆ. ಇಂತಹ ಪರಮಾದ್ಭುತವಾದ








ಕಾರ್ಯಕ್ರಮಕ್ಕೆ ಸಪರಿವಾರ ಸಮೇತನಾಗಿ ನನ್ನನ್ನು ಕರೆಯಿಸಿಕೊಂಡು ಗೌರವಿಸಿ ಸಂಭ್ರಮಿಸಲು ಕಾರಣರಾದ ಶ್ರೀ ಕೋ.ರಂ. ಬಸವರಾಜು, ಶ್ರೀ ವಿದ್ವಾನ್ ಬಾಲಚಂದ್ರ ಮುಂತಾದ ಶಿಷ್ಯವರ್ಗಕ್ಕೂ ನನ್ನ ಪುಸ್ತಕಕ್ಕೆ ಮೌಲಿಕವಾದ ಮುನ್ನುಡಿಯನ್ನು ಬರೆದುಕೊಟ್ಟು ಅಭಿನಂದನಾ ನುಡಿಗಳನ್ನಾಡಿದ ಪ್ರಿಯಶಿಷ್ಯನಾದ ಮಲ್ಲೇಪುರಂ ಜಿ ವೆಂಕಟೇಶ್‌ರವರಿಗೂ, ಪರಮ ಅಭಿಮಾನಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರಿಗೂ ನಾನೂ ಆಭಾರಿಯಾಗಿದ್ದೇನೆ ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು ಶ್ರೀ ಲಕ್ಷ್ಮೀನರಸಿಂಹಭಟ್ಟರು ಕೇವಲ ೬೦ ರೂಪಾಯಿಗಳಿಗೆ ಅಧ್ಯಾಪಕ ವೃತ್ತಿಯಲ್ಲಿ ನಿಯೋಜನೆ ಗೊಂಡವರು. ಕ್ರಮಕ್ರಮವಾಗಿ ಉಪ ಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಬಡ್ತಿ ಪಡೆದು ಅಧ್ಯಾಪನ ಸೇವೆಯನ್ನು ಮಾಡಿದರು. ಸಂಸ್ಕೃತ ಭಾಷೆ ಉಳಿಯಬೇಕು ಮತ್ತು ಬೆಳೆಯಬೇಕು ಎಂಬುದು ಅವರ ಗುರಿಯಾಗಿತ್ತು ಎಂಬುದಾಗಿ ತಮ್ಮ ಅಧ್ಯಕ್ಷೀಯ ನುಡಿಗಳನ್ನು ಆಡಿದರು.

ಪರಮಪೂಜ್ಯ ಶ್ರೀಶ್ರೀಗಳಾವರು ಕೊನೆಯಲ್ಲಿ ಆಶೀರ್ವಚನ ದಯಪಾಲಿಸುತ್ತಾ ಶ್ರೀಲಕ್ಷ್ಮೀ ನರಸಿಂಹಭಟ್ಟರವರು ಶ್ರೀಮಠದಲ್ಲಿ ಉದ್ದಾನಭಟ್ಟರೆಂದೇ ಚಿರಪರಿಚಿತರಾಗಿದ್ದರು. ಭಟ್ಟರವರು ಸಂಸ್ಕೃತ ಕಾಲೇಜಿನ ಘನತೆ ಗೌರವಗಳನ್ನು ಹೆಚ್ಚು ಮಾಡಿದವರು. ಆ ಕಾಲದಲ್ಲಿದ್ದ ರಾಷ್ಟ್ರಮಟ್ಟದ ವಿದ್ವಾಂಸರಾದ ಮಹಾಮಹೋಪಾಧ್ಯಾಯ ವಿದ್ವಾನ್ ವಿಶ್ವನಾಥಶಾಸ್ತ್ರಿಗಳವರು, ವಿದ್ವಾನ್ ವಾಸುದೇವಾಚಾರ್ಯರು ಮುಂತಾದ ಘನವಿದ್ವಾಂಸರ ಪಂಕ್ತಿಯಲ್ಲಿ ನಿಲ್ಲುವಂಥಹವರು. ನಮಗೂ ಕೂಡ ಕೆಲವು ಸಮಯ ಅವರ ಪಾಠವನ್ನು ಕೇಳುವ ಅವಕಾಶ ಲಭ್ಯವಾಗಿತ್ತು. ಅವರ ಬೇಸರವಿಲ್ಲದ ಉತ್ಸಾಹ ಹಾಸ್ಯಭರಿತವಾದ ದೃಷ್ಟಾಂತಗಳು, ಲೋಕಾನುಭವಗಳು ಮುಂತಾದವುಗಳನ್ನು ಬೆರೆಸಿ ಹೇಳುತ್ತಿದ್ದ ಪಠ್ಯಕ್ರಮವು ಆಕರ್ಷಣೀಯವಾಗಿತ್ತು. ಈ ಶಿಶಿರ ವಸಂತದಲ್ಲಿಯೂ ಅವರ ಉತ್ಸಾಹ ಯುವಕರನ್ನು ನಾಚಿಸುವಂತಿದೆ. ಶ್ರೀ ಭಟ್ಟರವರು ನಮ್ಮ ಶ್ರೀಮಠದ ಮೇಲೆ ಮತ್ತು ಪರಮಪೂಜ್ಯ ಗುರು ದೇವರ ವಿಷಯದಲ್ಲಿ ಯಾವತ್ತೂ ಅಭಿಮಾನಿಗಳಾಗಿದ್ದಾರೆ ಎಂದು ಶುಭಾಶೀರ್ವಾದ ನುಡಿಗಳನ್ನಾಡಿದರು.

ಕಾರ್ಯಕ್ರಮದ ಆರಂಭದಲ್ಲಿ ವೇ. ವಿದ್ವಾನ್ ಪ್ರಶಾಂತ ಭಟ್ಟರು ವೇದಘೋಷ ಮಾಡಿದರು. ಪ್ರಸಿದ್ಧ ಗಮಕ ವಿದುಷಿ ಶ್ರೀಮತಿ ಲಕ್ಷ್ಮೀಜಯಪ್ರಕಾಶ್‌ರವರು ಸುಶ್ರಾವ್ಯವಾಗಿ ಪ್ರಾರ್ಥನೆ ಮಾಡಿದರು. ಶ್ರೀ ರಾಮಕೃಷ್ಣರವರು ಸ್ವಾಗತವನ್ನು ಶ್ರೀ ಕೋ.ರಂ. ಬಸವರಾಜುರವರು ಪ್ರಸ್ತಾವನೆಯನ್ನು ಸಲ್ಲಿಸಿದರು. ಡಾ. ಸೌಮ್ಯಶ್ರೀ ವಂದನೆಯನ್ನು ಸಲ್ಲಿಸಿದರು. ಶ್ರೀ ಡಿ.ಎಸ್. ನಾಗರಾಜುರವರು ಕಾರ್ಯಕ್ರಮವನ್ನು ನಿರೂಪಿಸಿದರು. ■

## ಸಂತ ಶ್ರೇಷ್ಠ ಸಿದ್ಧಗಂಗಾಶ್ರೀ

ಅಕ್ಷರ, ಅನ್ನ, ವಸತಿ ದಾಸೋಹದ
ಅಭಿನವ ಬಸವಣ್ಣರಾದ ಜಗಕೆ
ಭಕ್ತಿ ಧರ್ಮದ ದಾರಿದೀಪದ
ಮಾನವತಾವಾದಿ ಸಿದ್ಧಗಂಗಾಶ್ರೀ

ಲಕ್ಷಾಂತರ ಮಕ್ಕಳ ಸಲಹುತಲಿ
ಅಧ್ಯಾತ್ಮಿಕ ಜ್ಞಾನದ ಬೆಳಕಾಗಿ
ಜಾತಿರಹಿತ ಸಮಾಜ ಕಲ್ಯಾಣದ
ಸಂಸ್ಕೃತಿ ಹರಿಕಾರರು ಸಿದ್ಧಗಂಗಾಶ್ರೀ

ಕಾಯಕ ಕಾಯಕಲ್ಪದಲಿ
ಅಂತರಂಗ ಬಹಿರಂಗದಲಿ
ಭಗವಂತನ ಆತ್ಮಸಾಕ್ಷಾತ್ಕಾರ
ಕಂಡ ಮಹಾನುಭಾವ ಸಿದ್ಧಗಂಗಾಶ್ರೀ...!

ಜಗದಲಿ ಶ್ರೇಷ್ಠ ಸಂತರಾಗಿ
ಮನ ಮನಗಳಲಿ ದೇವರಾಗಿ
ಕಾಯಕವೇ ಕೈಲಾಸ ತತ್ತ್ವದ
ಸಂದೇಶ ಸಾರಿದ ಸಿದ್ಧಗಂಗಾಶ್ರೀ...!


ಡಾ. ಕೆ.ಬಿ. ಸದಾನಂದಾರಾಧ್ಯ
ಶಿಕ್ಷಕ, ಸಾಹಿತಿ
ಅಧ್ಯಕ್ಷರು, ಗ್ರಾಮೀಣ ಸಂಸ್ಕೃತಿ ಪ್ರತಿಷ್ಠಾನ (ರಿ)
ನೆಲಮಂಗಲ

## ಅಭಿನಂದನೆ

### ಕನ್ನಡಿಗರ ಸಾರ್ವಭೌಮ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಸಾರಥಿಯಾಗಿ

## ನಾಡೋಜ ಡಾ. ಮಹೇಶ ಜೋಶಿ

ಒಂದು ಶತಮಾನಕ್ಕೂ ಹೆಚ್ಚು ಭವ್ಯ ಇತಿಹಾಸ, ಪರಂಪರೆಯುಳ್ಳ ಕನ್ನಡಿಗರ ಏಕೈಕ ಮಾತೃ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ೨೬ನೇ ಅಧ್ಯಕ್ಷರಾಗಿ ನಾಡೋಜ ಡಾ. ಮಹೇಶ ಜೋಶಿ ಅವರು ಆಯ್ಕೆಯಾಗಿರುವುದಕ್ಕೆ 'ಸಿದ್ಧಗಂಗಾ' ಹೃತ್ಪೂರ್ವಕ ಅಭಿನಂದನೆಗಳನ್ನು ಹಾಗೂ ಶುಭಾಶಯಗಳನ್ನು ಕೋರುತ್ತದೆ.

ಬೆಂಗಳೂರು ದೂರದರ್ಶನ ಕೇಂದ್ರದ ನಿರ್ದೇಶಕರಾಗಿ, ದೂರದರ್ಶನ ಚಂದನ, ದೆಹಲಿ ಮತ್ತು ದಕ್ಷಿಣ ಭಾರತದ ಹೆಚ್ಚುವರಿ ಮಹಾನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದ ಡಾ. ಮಹೇಶ ಜೋಶಿಯವರು ಜನಪ್ರಿಯ 'ಮಧುರ ಮಧುರವೀ ಮಂಜುಳಗಾನ'ದ ಮೂಲಕ ಕನ್ನಡಿಗರ ಮನಸ್ಸನ್ನು ಗೆದ್ದವರು. ಹಂಪಿ ವಿಶ್ವವಿದ್ಯಾಲಯದ ಪ್ರತಿಷ್ಠಿತ 'ನಾಡೋಜ', ಗುಲ್ಬರ್ಗಾ ವಿಶ್ವವಿದ್ಯಾಲಯದ 'ಗೌರವ ಡಾಕ್ಟರೇಟ್', 'ಕರ್ನಾಟಕ ರಾಜ್ಯೋತ್ಸವ' ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳಿಗೆ ಭಾಜನರಾದ ಡಾ. ಜೋಶಿಯವರು ಕನ್ನಡ ನಾಡು ನುಡಿಯ ಬಗ್ಗೆ ಅಪಾರವಾದ ಕಳಕಳಿಯುಳ್ಳವರು. ಹಾವೇರಿ ಜಿಲ್ಲೆಯ ಶಿಗ್ಗಾವಿಯಲ್ಲಿ ನಡೆದ ೯ನೇಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷ ಸ್ಥಾನ ಅಲಂಕರಿಸಿದವರು. ಸಂತ ಶಿಶುನಾಳ ಶರೀಫರು ಹಾಗೂ ಕಳಸದ ಗುರುಗೋವಿಂದ ಭಟ್ಟರ ಪ್ರತಿಷ್ಠಾನದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಡಾ. ಮಹೇಶ ಜೋಶಿ ಅವರು ಸೇವಾವಧಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸಾಧನೆಗಳ ಹೆಜ್ಜೆ ಗುರುತುಗಳನ್ನು ಮೂಡಿಸುವಂತಾಗಲಿ. ಚುನಾವಣಾ ಪ್ರಣಾಳಿಕೆಯಲ್ಲಿ ನೀಡಿದ ವಾಗ್ದಾನ ಅರ್ಥಪೂರ್ಣವಾಗಿ ಸಾಕಾರಗೊಳ್ಳಲಿ ಎಂದು ಸಿದ್ಧಗಂಗಾ ಈ ಸಂದರ್ಭದಲ್ಲಿ ಶುಭ ಹಾರೈಸುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨



# ಹಾಲಕೇರಿ ಶ್ರೀ ಅನ್ನದಾನೇಶ್ವರ ಸಂಸ್ಥಾನ ಮಠದ ಪೂಜ್ಯ ಡಾ. ಶ್ರೀ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ಲಿಂಗೈಕ್ಯ

ಗದಗ ಜಿಲ್ಲೆ ಶ್ರೀ ಅನ್ನದಾನೇಶ್ವರ ಸಂಸ್ಥಾನ ಮಠದ ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ನವೆಂಬರ್ ೨೨ ರಂದು ಕಾರ್ತೀಕ ಸೋಮವಾರ ಲಿಂಗೈಕ್ಯರಾದರು. ಅವರಿಗೆ ೮೫ ವರ್ಷಗಳಾಗಿತ್ತು.

ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ 'ಬಿದಿರೆ' ಪುಣ್ಯ ಗ್ರಾಮದಲ್ಲಿ ಸ್ವತಂತ್ರ ಮಠದ ಶರಣ ದಂಪತಿಗಳಾದ ಬಸವಲಿಂಗಯ್ಯ ಮತ್ತು ಗುರುವಮ್ಮನವರ ಪುತ್ರರತ್ನವಾಗಿ ಜನಿಸಿದರು. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ರಾಚಯ್ಯ ಎಂದು. ಶ್ರೀ ಗುರುಕುಮಾರ ಶಿವಯೋಗಿಗಳು ನಿರ್ಮಿಸಿದ ಶಿವಯೋಗ ಮಂದಿರದಲ್ಲಿ ಜಂಗಮಾಶ್ರಯ ಪಡೆದು ಸಂಗನಬಸವ ಎಂಬ ಅಭಿಧಾನದಿಂದ ಆಧ್ಯಾತ್ಮಿಕ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದರು. ಕಾಶಿಯಲ್ಲಿ ಉನ್ನತ ಶಿಕ್ಷಣ ಪಡೆದರು. ಕನ್ನಡ, ಸಂಸ್ಕೃತ, ಹಿಂದಿ ಹಾಗೂ ಇಂಗ್ಲೀಷ್ ಭಾಷೆಯಲ್ಲಿ ಪರಿಣತರಾಗಿ, ಧರ್ಮ-ತತ್ತ್ವ ವಿವೇಕ ಪಡೆದು ಕಾಯಕ ಶಿವಯೋಗಿಗಳೆಂಬ ಹೆಗ್ಗಳಿಕೆಗೆ ಪಾತ್ರರಾದರು.

ಪೂಜ್ಯ ಶ್ರೀ ಶ್ರೀ ನೀಲಲೋಚನ ಸ್ವಾಮಿಗಳು ಹಾಗೂ ಕಾಯಕ ತಪಸ್ವಿ, ಪೂಜ್ಯ ಶ್ರೀ ಶ್ರೀ ನಾಗನೂರು ಶಿವಬಸವ ಸ್ವಾಮಿಗಳವರ ಮಾನಸ ಶಿಷ್ಯರಾಗಿದ್ದ ಪೂಜ್ಯ ಶ್ರೀ ಶ್ರೀ ಸಂಗನಬಸವ ಶ್ರೀಗಳವರು, ೧೯೭೨ ರಲ್ಲಿ ಜಗದ್ಗುರು ಮೂರು ಸಾವಿರ ಮಠದ ಪೂಜ್ಯ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆಯ ಶ್ರೀ ಕೊಟ್ಟೂರುಸ್ವಾಮಿ ಸಂಸ್ಥಾನ ಮಠದ ಜಗದ್ಗುರುಗಳಾಗಿ ಅಧಿಕಾರ ಸ್ವೀಕರಿಸಿದರು. ೧೯೮೭ ರಲ್ಲಿ ಹಾಲಕೆರೆ ಸಂಸ್ಥಾನ ಮಠದ ಅಧಿಕಾರದ ಚುಕ್ಕಾಣಿ ಹಿಡಿದು ಡಾ. ಶ್ರೀ ಶ್ರೀ ಅಭಿನವ ಅನ್ನದಾನೇಶ್ವರ ಶ್ರೀಗಳಾಗಿ ಮಠದ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹಾನಗಲ್ ಶಿವಯೋಗ ಮಂದಿರದ ಅಧ್ಯಕ್ಷರಾಗಿ ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಸಾಕಾರಗೊಳಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿದ್ದರು.

ಪೂಜ್ಯ ಶ್ರೀ ಸಂಗನಬಸವ ಸ್ವಾಮಿಗಳವರು ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ತಮ್ಮದೇ ಆದ ಅಮೂಲ್ಯ ಕೊಡುಗೆಯನ್ನು ನೀಡಿದ್ದರು. ತ್ರಿವಿಧ ದಾಸೋಹದ ಮೂಲಕ ಭಕ್ತರ ಪಾಲಿಗೆ ಬೆಳಕಾಗಿದ್ದ ಶ್ರೀಗಳು ತಮ್ಮ ಸೇವಾವಧಿಯಲ್ಲಿ ಮಾಡಿದ ಸಾಧನೆ, ಮೂಡಿಸಿದ ಹೆಜ್ಜೆ ಗುರುತುಗಳು ಸದಾ ನೆನಪಿನಲ್ಲಿ ಉಳಿಯುವಂತಹವುಗಳು ಹಾಗೂ ಸ್ಮರಿಸುವಂತಹವು.

ವೀರಶೈವ-ಲಿಂಗಾಯತ ಹೋರಾಟದ ಮುಂಚೂಣಿ ಯಲ್ಲಿದ್ದ ಪೂಜ್ಯ ಶ್ರೀಗಳು ಬಾಗಲಕೋಟೆ, ಹುಬ್ಬಳ್ಳಿ ಬಸವೇಶ್ವರ ವಿದ್ಯಾವರ್ಧಕ ಸಂಘ, ಅನ್ನದಾನ ವಿಜಯ ವಿದ್ಯಾವರ್ಧಕ ಸಂಘ, ಬಳ್ಳಾರಿ ವಿಜಯನಗರದ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆಗಳ ಗೌರವ ಅಧ್ಯಕ್ಷರಾಗಿ ಆಯಾ ಸಂಸ್ಥೆಗಳ ಅಭಿವೃದ್ಧಿಗೆ ಅಮೂಲ್ಯ ಕೊಡುಗೆ ನೀಡಿದ್ದರು. ಗದಗ, ಬಳ್ಳಾರಿ, ಹೊಸಪೇಟೆ, ಕೊಟ್ಟೂರು, ಹಾಲಕೇರಿಯೂ ಸೇರಿದಂತೆ ನಾಡಿನಾದ್ಯಂತ ಸುಮಾರು ೧೨೮ ಶಾಖಾ ಮಠಗಳಿದ್ದು, ಅವುಗಳ ಪ್ರಗತಿಗೆ ಮಾರ್ಗದರ್ಶನ ಮಾಡಿ ಆ ಮಠಗಳು ಮುನ್ನಡೆಯಲು ಆಶೀರ್ವದಿಸಿದ್ದಾರೆ. ಅಲ್ಲದೆ ಈ









ಶಾಖಾಮಠಗಳಿಗೆ ಸೇರಿದ ೭೦ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳ ಮೂಲಕ ಉತ್ತರ ಕರ್ನಾಟಕದ ಲಕ್ಷಾಂತರ ವಿದ್ಯಾರ್ಥಿಗಳಿಗೆ ಬಾಳಿಗೆ ಬೆಳಕಾಗಿದ್ದರು.

ಪೂಜ್ಯ ಡಾ. ಶ್ರೀ ಶ್ರೀ ಸಂಗನಬಸವ ಸ್ವಾಮಿಗಳವರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದು, ಶ್ರೀಮಠದಲ್ಲಿ ವಜ್ರ ಮಹೋತ್ಸವ ಸಂದರ್ಭದಲ್ಲಿ ನಡೆದ ಶಿವಾನುಭವ ಗೋಷ್ಠಿಯನ್ನು ಉದ್ಘಾಟಿಸಿ ಆಶೀರ್ವಚನ ನೀಡಿದ್ದರು. ಅಮೃತ ಮಹೋತ್ಸವ ಸಮಾರಂಭದ ಅಂಗವಾಗಿ ಏರ್ಪಡಿಸಿದ್ದ ಮಹಿಳಾ ಗೋಷ್ಠಿಯ ಸಾನ್ನಿಧ್ಯ ವಹಿಸಿದ್ದರು. ಅಲ್ಲದೆ ಪರಮಪೂಜ್ಯ ಶ್ರೀಗಳವರ ೧೦೪ನೇ ಗುರುವಂದನಾ ಸಮಾರಂಭದಲ್ಲಿ ಭಾಗವಹಿಸಿ ನುಡಿನಮನ ಸಲ್ಲಿಸಿದ್ದರು.

ಪೂಜ್ಯ ಶ್ರೀಗಳವರ ಅಂತ್ಯಕ್ರಿಯೆ ಹಾಲಕೇರಿ ಮಠದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಹಾಗೂ ಸುತ್ತೂರು ಮಠದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಹಾಗೂ ಹಾರನಹಳ್ಳಿ ಕೋಡಿಮಠದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಾನಂದ ರಾಜಯೋಗೀಂದ್ರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ವೀರಶೈವ ಲಿಂಗಾಯತ ವಿಧಿವಿಧಾನಗಳ ಮೂಲಕ ನಡೆಯಿತು. ಅಪಾರ ಸಂಖ್ಯೆಯಲ್ಲಿ ಭಕ್ತರು, ಅಭಿಮಾನಿಗಳು ಸಮಾಧಿ ಕ್ರಿಯೆಯಲ್ಲಿ ಭಾಗವಹಿಸಿ ಶಿವದೇಹದ ಅಂತಿಮ ದರ್ಶನ ಪಡೆದರು. ಅವರ ಅಗಲಿಕೆ ಸಮಾಜಕ್ಕೆ ತುಂಬಲಾಗದ ನಷ್ಟ. ಪರಮಪೂಜ್ಯರ ದಿವ್ಯಾತ್ಮಕ್ಕೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಶಾಂತಿಯನ್ನು ನೀಡಲಿ ಎಂದು ಸಿದ್ಧಗಂಗಾ ಭಕ್ತಿಪೂರ್ವಕ ಶ್ರದ್ಧೆಯನ್ನರ್ಪಿಸುತ್ತದೆ.

## ಶ್ರದ್ಧಾಂಜಲಿ



### ಶ್ರೀಮತಿ ಟಿ.ಎಸ್. ಭ್ರಮರಾಂಭ

ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯಲ್ಲಿ ೩೫ ವರ್ಷಗಳ ಕಾಲ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ಶ್ರೀಮತಿ ಟಿ.ಎಸ್. ಭ್ರಮರಾಂಭ ಅವರು ಅಕ್ಟೋಬರ್ ೨೧ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೬೨ ವರ್ಷವಾಗಿತ್ತು.

ಶ್ರೀಮತಿ ಟಿ.ಎಸ್. ಭ್ರಮರಾಂಭ ಅವರು ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಹಾಗೂ ಮಧುಗಿರಿಯ ಮಹಾತ್ಮಗಾಂಧಿ ಬಾಲಿಕಾ ಪ್ರೌಢಶಾಲೆಯಲ್ಲಿ ಮುಖ್ಯ ಶಿಕ್ಷಕರಾಗಿದ್ದ ಶ್ರೀ ವಿ. ರಾಜಶೇಖರಯ್ಯ ಅವರ ಧರ್ಮಪತ್ನಿ. ಸಾಹಿತ್ಯ ಕ್ಷೇತ್ರದಲ್ಲಿ ಅಪಾರವಾದ ಆಸಕ್ತಿಯನ್ನು ಹೊಂದಿದ್ದು, ಅನೇಕ ಗೋಷ್ಠಿಗಳಲ್ಲಿ, ಸಮಾರಂಭಗಳಲ್ಲಿ, ವಿವಿಧ ವಿಷಯಗಳನ್ನು ಕುರಿತು ಉಪನ್ಯಾಸ ನೀಡಿ ಉತ್ತಮ ವಾಗ್ಮಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಶ್ರೀಮತಿಯವರು ಮೈತ್ರಿ ಬಳಗದ ಸಕ್ರಿಯ ಕಾರ್ಯಕರ್ತೆಯಾಗಿದ್ದರು. ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ ಸಂದರ್ಭದಲ್ಲಿ ಕೊಡಮಾಡುವ 'ಗೋಸಲಶ್ರೀ' ಪ್ರಶಸ್ತಿಯ ಪ್ರಾಯೋಜಕರಾಗಿದ್ದರು.

ಶ್ರೀಮತಿ ಟಿ.ಎಸ್. ಭ್ರಮರಾಂಭ ಅವರು ಪತಿ, ಪುತ್ರಿ, ಪುತ್ರ ಹಾಗೂ ಅಪಾರ ಬಂಧು ಬಳಗವನ್ನು ಅಗಲಿದ್ದಾರೆ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರು ಪರಂಪರೆ ನೀಡಲಿ ಎಂದು ಸಿದ್ಧಗಂಗಾ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.







# ವರದಿ : ಬಸವ ತತ್ತ್ವದಿಂದ ಸಾಮಾಜಿಕ ಸಮಾನತೆ

– ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು



ಅಕ್ಟೋಬರ್ ೨೫ ರಂದು ಮಳವಳ್ಳಿ ತಾಲ್ಲೂಕಿನ ವೀರರಾಜಪುರದಲ್ಲಿ ಹಮ್ಮಿಕೊಂಡಿದ್ದ ಶರಣ ಸಂಗಮ ಕಾರ್ಯಕ್ರಮದ ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳ ಸಂದೇಶದಲ್ಲಿ "ಮೇಲು ಕೀಳೆಂಬ ಭಿನ್ನತೆಯನ್ನು ತೊಡೆದು ಹಾಕಿದ ವಿಶ್ವಗುರು ಬಸವಣ್ಣನವರು ಹನ್ನೆರಡನೆ ಶತಮಾನದಲ್ಲೇ ಸರ್ವರೂ ಸಮಾನವಾಗಿ ಬದುಕಬೇಕೆಂಬ ಆಶಯದೊಂದಿಗೆ ಅನುಷ್ಠಾನಗೊಳಿಸಿರುವ ಬಸವತತ್ತ್ವವನ್ನು ಆಚರಣಾ ಕ್ರಾಂತಿಯನ್ನಾಗಿಸಿದಲ್ಲಿ ವಿಶ್ವದಲ್ಲೇ ಶಾಂತಿ ಸಹ ಬಾಳ್ವೆ ನೆಲೆಸಲು ಸಾಧ್ಯವಾಗುತ್ತದೆ. ಹಳ್ಳಿಯಿಂದ ಮೊದಲ್ಗೊಂಡು ರಾಷ್ಟ್ರ-ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿರುವ ಅಸಮಾನತೆ, ಅಶಾಂತಿ, ಅಸಹಿಷ್ಣುತೆ, ವಾತಾವರಣವನ್ನು ಹೋಗಲಾಡಿಸಲು ಪರಸ್ಪರ ಪ್ರೀತಿ, ಕಾಯಕತತ್ತ್ವ ಸರ್ವರೂ ಸಮಾನರೆಂಬ ವಂದೇ ಭಾವವನ್ನು ಮೈಗೂಡಿಸಿಕೊಳ್ಳಬೇಕು. ಕಾಯಕದಲ್ಲಿ ಯಾವುದೂ ಕೀಳು-ಮೇಲೆಂಬುದಿಲ್ಲ. ಸದ್ಭಾವನೆಯಿಂದ ಪ್ರತಿಯೊಂದು ಕಾಯಕದಲ್ಲೂ ನಿಷ್ಠೆಯನ್ನಿಟ್ಟು ಮಾಡಿದಾಗ ಆರ್ಥಿಕ ಪ್ರಗತಿ ಸಾಧ್ಯವಾಗುತ್ತದೆ. ಮನುಷ್ಯ ಜನ್ಮತಳೆದ ನಂತರ ಈ ಭೂಮಿಗೆ ಮಹತ್ತರವಾದ ಕೊಡುಗೆಯೊಂದನ್ನು ಕೊಟ್ಟಾಗ ಮಾತ್ರ ಜೀವನ ಸಾರ್ಥಕವಾಗುತ್ತದೆ. ಈ ನಿಟ್ಟಿನಲ್ಲಿ ಪ್ರತಿಯೊಬ್ಬರೂ ಕಾಯಕ-ದಾಸೋಹ ತತ್ತ್ವವನ್ನು ಅಳವಡಿಸಿಕೊಂಡು ಬದುಕಬೇಕೆಂದು" ಪೂಜ್ಯ ಶ್ರೀಗಳವರು ಹೇಳಿದರು.

"ಪ್ರಸ್ತುತ ದಿನಮಾನಗಳಲ್ಲಿ ಬಸವಾದಿ ಶರಣರು ಹಾಕಿಕೊಟ್ಟ ಹಾದಿ ಅತ್ಯಂತ ಅಮೂಲ್ಯವಾಗಿದ್ದು, ಇಂದಿಗೂ ಎಂದೆಂದಿಗೂ ಶರಣರು ಪ್ರತಿಪಾದಿಸಿದ ತತ್ತ್ವ ಸಿದ್ಧಾಂತಗಳು ಮಾನವ ಸಮಾಜಕ್ಕೆ ಮಾರ್ಗದರ್ಶಕವಾಗಿ ಬೆಳಕನ್ನು ಬೀರುವಂತಿವೆ. ಅಸಮಾನತೆಯ ವಿರುದ್ಧ ಸಮಾಜದ ಕ್ರಾಂತಿಕಾರಿ ಬದಲಾವಣೆಯಲ್ಲಿ ಬಸವಣ್ಣನವರ ಕೊಡುಗೆ ಅಪಾರ. ಸಮಾಜದಲ್ಲಿ ಜಾತಿ ಪದ್ಧತಿ ನಿರ್ಮೂಲ ಮಾಡಿ ಸಾಮಾಜಿಕ ನ್ಯಾಯಕ್ಕೆ ಹೋರಾಡಿ ಇಡಿ ಮನುಕುಲಕ್ಕೆ ದಾರಿ ದೀಪವಾಗಿದ್ದಾರೆ" ಎಂದರು. "ಯಾರನ್ನು ಕೀಳಾಗಿ ಕಾಣದೆ ಎಲ್ಲರಲ್ಲೂ ಪ್ರೀತಿ ವಿಶ್ವಾಸದಿಂದ ಬದುಕು ನಡೆಸುವ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗಬೇಕಿದೆ. ವಿಶೇಷವಾಗಿ ಇಂದಿನ ಯುವಶಕ್ತಿ ದೇಶಭಕ್ತಿಯನ್ನು ಮೈಗೂಡಿಸಿಕೊಂಡು ಕಾಯಕ ತತ್ತ್ವಕ್ಕೆ ಹೆಚ್ಚಿನ ಒತ್ತು ನೀಡುವುದು ಅನಿವಾರ್ಯವಾಗಿದೆ" ಎಂದು ಹೇಳಿದರು

ಇದೇ ಸಂದರ್ಭದಲ್ಲಿ ಖ್ಯಾತ ವೈದ್ಯರಾದ ಡಾ. ವಿ.ಎಲ್. ನಂದೀಶ್, ಸಮಾಜ ಸೇವಕ ಶ್ರೀ ವಿ.ಎಲ್. ಮಹದೇವಸ್ವಾಮಿ, ಶ್ರೀ ವಿ.ಎಂ. ಮಹೇಂದ್ರ ಅವರನ್ನು ಅಭಿನಂದಿಸಿದರು. ಸಮಾರಂಭದಲ್ಲಿ ಗ್ರಾಮ ಪಂಚಾಯಿತಿ ಸದಸ್ಯ ಶ್ರೀ ಮಹದೇವಸ್ವಾಮಿ, ಶ್ರೀ ಪ್ರಸಾದ್, ಶ್ರೀ ಸುರೇಶ್, ಕಾಯಕಯೋಗಿ ಫೌಂಡೇಶನ ಅಧ್ಯಕ್ಷರಾದ ಶ್ರೀ ಎಂ. ಶಿವಕುಮಾರ್ ಸೇರಿದಂತೆ ಅನೇಕ ಗಣ್ಯರು ಉಪಸ್ಥಿತರಿದ್ದರು.

(ಕೃಪೆ: ಕಾಯಕಯೋಗಿ, ಮಂಡ್ಯ)







## ದಾನಿಗಳ ಪಟ್ಟಿ          ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 3335. | ಶ್ರೀ ಶಿವಣ್ಣ ಪಿ.<br>ತುಮಕೂರು. | 50,000 |
| 3336. | ಶ್ರೀ ಕೆ. ಚಂದ್ರಶೇಖರ್‌ರಾವ್<br>ತುಮಕೂರು. | 62,500 |
| 3337. | ಡಾ॥ ಹೆಚ್.ಪಿ. ಮಲ್ಲಿಕಾರ್ಜುನ<br>ಶಿವಮೊಗ್ಗ | 50,000 |
| 3338. | ಶ್ರೀ ಕೆಂಚಮ್ಮ<br>ತುಮಕೂರು. | 25,000 |
| 3339. | ಶ್ರೀ ಕಲ್ಲೇಶ್ವರ್ ಹೆಚ್.ಎಂ.<br>ದಾವಣಗೆರೆ | 1,25,000 |
| 3340. | ಶ್ರೀ ಬಿ. ಮಂಜುನಾಥ್<br>ತುಮಕೂರು. | 1,20,000 |
| 3341. | ಶ್ರೀ ಬಿ.ಎಸ್. ಜ್ಯೋತಿ<br>ತುಮಕೂರು. | 10,000 |
| 3342. | ಶ್ರೀ ಪ್ರಕಾಶ್‌ರಾವ್<br>ತುಮಕೂರು. | 20,000 |
| 3343. | ಶ್ರೀ ವಿವೇಕಾನಂದ ಜಿ.ವಿ.<br>ತುಮಕೂರು. | 50,000 |
| 3344. | ಶ್ರೀ ಎನ್.ವಿ. ಶಿವಲಿಂಗಪ್ರಸಾದ್<br>ತುಮಕೂರು. | 20,000 |
| 3345. | ಶ್ರೀ ಸಿ. ಮಲ್ಲಿಕಾರ್ಜುನಪ್ಪ<br>ಧಾರವಾಡ | 20,000 |
| 3346. | ಶ್ರೀ ಎಂ.ಕೆ. ಸುರೇಶ್<br>ತುಮಕೂರು. | 30,000 |
| 3347. | ಶ್ರೀ ಅಜಯ್‌ಕುಮಾರ್<br>ತುಮಕೂರು. | 50,000 |
| 3348. | ಶ್ರೀ ಜಿ.ವಿ. ಪ್ರಭುದೇವ್<br>ತುಮಕೂರು. | 3,00,000 |
| 3349. | ಶ್ರೀ ವಿಜಯಕುಮಾರ್ ವಿ.ಬಿ.<br>ಬೆಂಗಳೂರು. | 30,000 |
| 3350. | ಶ್ರೀ ಬಿ.ಹೆಚ್. ಮಂಜುನಾಥ್<br>ಚಿತ್ರದುರ್ಗ. | 75,000 |
| 3351. | ಶ್ರೀ ಜಿ. ಕೃಷ್ಣ<br>ತುಮಕೂರು. | 12,000 |
| 3352. | ಶ್ರೀ ಎಂ. ಸೋಮಸುಂದರ್<br>ತುಮಕೂರು. | 30,000 |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 3353. | ಶ್ರೀ ಸಿ.ಟಿ. ಚಂದ್ರಶೇಖರ್<br>ಚೇಳೂರು. | 20,000 |
| 3354. | ಶ್ರೀ ಎ.ಆರ್. ಗಿರೀಶ್<br>ತುಮಕೂರು. | 12,500 |
| 3355. | ಶ್ರೀ ಎನ್.ಆರ್. ನಂದಕುಮಾರ್<br>ತುಮಕೂರು. | 20,000 |
| 3356. | ಶ್ರೀ ರಾಜಕುಮಾರ್<br>ತುಮಕೂರು. | 50,000 |
| 3357. | ಶ್ರೀ ಶ್ರೀನಿವಾಸ್ ಕೆ.ಸಿ.<br>ತುಮಕೂರು. | 30,000 |
| 3358. | ಶ್ರೀ ಜಿ.ಬಿ. ಕುಟ್ಟಪ್ಪ<br>ಸೋಮವಾರಪೇಟೆ | 12,000 |
| 3359. | ಶ್ರೀಮತಿ ಶ್ರುತಿ ಟಿ.ಎನ್.<br>ತುಮಕೂರು. | 30,000 |
| 3360. | ಶ್ರೀಮತಿ ಹೆಚ್.ಬಿ. ಕುಸುಮ<br>ಹೊನ್ನುಡಿಕೆ | 30,000 |
| 3361. | ಶ್ರೀ ಕೆ. ಕಾಮರಾಜ್ ಕಲ್ಲುಗುಡು<br>ಬರಗೇನಹಳ್ಳಿ | 20,000 |
| 3362. | ಶ್ರೀ ಬಿ. ವಿಶ್ವೇಶ್ವರಾಧ್ಯ<br>ಬೆಂಗಳೂರು. | 50,000 |
| 3363. | ಶ್ರೀ ಸಂಗಪ್ಪ ಟಿ.ಎಸ್.<br>ತುಮಕೂರು. | 20,000 |
| 3364. | ಶ್ರೀ ಆರ್.ಎಸ್. ವಿಜಯಕುಮಾರ<br>ತುಮಕೂರು. | 25,000 |
| 3365. | ಶ್ರೀ ಆದರ್ಶ ಎಂ.<br>ತುಮಕೂರು. | 12,000 |
| 3366. | ಶ್ರೀ ನರಸಿಂಹಮೂರ್ತಿ ಎಲ್.<br>ತುಮಕೂರು. | 20,000 |
| 3367. | ಶ್ರೀ ರಾಮಪ್ರಸಾದ್ ಆರ್<br>ತುಮಕೂರು. | 20,000 |
| 3368. | ಶ್ರೀ ಸುಭಕರ ಜಿ.ಎಲ್.<br>ತುಮಕೂರು. | 20,000 |
| 3369. | ಶ್ರೀ ಎನ್.ಆರ್. ನಾಗರಾಜಯ್ಯ<br>ನೆಲಮಂಗಲ. | 75,000 |
| 3370. | ಶ್ರೀ ಅಬ್ದುಲ್ ಸುಬಾನ್<br>ತುಮಕೂರು. | 20,000 |

(ಮುಂದುವರಿಯುವುದು)

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore-10, Ph : 23404232